# ಸಂಗಮೇಶ ಬುಜಗೊಂಡರ "ಮಕ್ಕಳ ಸಾಹಿತ್ಯ ಒಂದು ಅಧ್ಯಯನ"

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ನಿಬಂಧ)

ಸಂಶೋಧಕರು
ಶ್ರೀ ರಾಜಮಾನೆ ಅರುಣಕುಮಾರ
ಎಂ.ಎ., ಬಿ.ಇಡಿ.
ಶಿಕ್ಷಕರು, ಅಥಣಿ, ಜಿ. ಬೆಳಗಾವಿ

ಮಾರ್ಗದರ್ಶಕರು
ಡಾ. ಅಶೋಕ ನರೋಡೆ
ಉಪನ್ಯಾಸಕರು
ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯ, ಮಹಾಲಿಂಗಪೂರ





ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ಜಿ. ಬೆಳಗಾವಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬
೨೦೧೫

# ಸಂಗಮೇಶ ಗುಜಗೊಂಡರ "ಮಕ್ಕಳ ಸಾಹಿತ್ಯ ಒಂದು ಅಧ್ಯಯನ"

(ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನಾ ನಿಬಂಧ)



ಸಂಶೋಧಕರು

**ಶ್ರೀ ರಾಜಮಾನೆ ಅರುಣಕುಮಾರ**
ಎಂ.ಎ., ಬಿ.ಇಡಿ.
ಶಿಕ್ಷಕರು, ಅಥಣಿ, ಜಿ. ಬೆಳಗಾವಿ

ಮಾರ್ಗದರ್ಶಕರು

**ಡಾ. ಅಶೋಕ ನರೋಡೆ**
ಉಪನ್ಯಾಸಕರು
ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯ, ಮಹಾಲಿಂಗಪೂರ



ಶ್ರೀ ಬಿ.ಆರ್. ದರೂರ ಸಂಶೋಧನಾ ಕೇಂದ್ರ
ಹಾರೂಗೇರಿ, ಜಿ. ಬೆಳಗಾವಿ

**ಕನ್ನಡ ವಿಶ್ವವಿದ್ಯಾಲಯ, ಹಂಪಿ,**
**ವಿದ್ಯಾರಣ್ಯ – ೫೮೩ ೨೭೬**
**೨೦೧೨**

1206

# ಘೋಷಣಾ ಪತ್ರ

'ಪ್ರೊ. ಸಂಗಮೇಶ ಗುಜಗೊಂಡರ "ಮಕ್ಕಳ ಸಾಹಿತ್ಯ : ಒಂದು ಅಧ್ಯಯನ" ಎಂಬ ಶೀರ್ಷಿಕೆಯ ನಿಬಂಧವನ್ನು **ಡಾ. ಅಶೋಕ ನರೋಡೆ** ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. **ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದ** ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವುದಿಲ್ಲವೆಂದು ಹಾಗೂ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಅಥಣಿ

ದಿನಾಂಕ : 30-7-2015.

**ರಾಜಮಾನ ಅರುಣಕುಮಾರ**
ಎಂ.ಎ., ಬಿ.ಇಡಿ.
ಶಿಕ್ಷಕರು
ಅಥಣಿ, ಜಿ. ಬೆಳಗಾವಿ

# ಪ್ರಮಾಣ ಪತ್ರ

**ಶ್ರೀ ರಾಜಮಾನೆ ಅರುಣಕುಮಾರ** ಅಥಣಿ ಇವರು ನನ್ನ ಮಾರ್ಗದರ್ಶನದಲ್ಲಿ **'ಶ್ರೀ ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯ : ಒಂದು ಅಧ್ಯಯನ"** ಎಂಬ ಎಂ.ಫಿಲ್. ನಿಬಂಧವನ್ನು ಸಿದ್ಧಪಡಿಸಿದ್ದಾರೆ. ಪ್ರಸ್ತುತ ನಿಬಂಧವು ಎಂ.ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯ, ಹಂಪಿಗೆ ಹಾರೂಗೇರಿಯ ಬಿ.ಆರ್. ದರೂರ ಸಂಶೋಧನಾ ಕೇಂದ್ರದ ಮೂಲಕ ಸಲ್ಲಿಸಲಾಗಿದೆ. ಈ ನಿಬಂಧವು ಈ ಮೊದಲು ಇಡಿಯಾಗಿ ಆಗಲಿ, ಬಿಡಿ-ಬಿಡಿಯಾಗಿ ಆಗಲಿ ಎಲ್ಲಿಯೂ ಪ್ರಕಟವಾಗಿಲ್ಲವೆಂದು ಪ್ರಮಾಣೀಕರಿಸುತ್ತೇನೆ

**ಡಾ. ಅಶೋಕ ನರೋಡೆ**
ಮಾರ್ಗದರ್ಶಕರು
ಬಿ.ಆರ್. ದರೂರ ಸಂಶೋಧನ ಸಂಸ್ಥೆ
ಹಾರೂಗೇರಿ, ತಾ॥ ರಾಯಬಾಗ

ಸ್ಥಳ : ಹಾರೂಗೇರಿ
ದಿನಾಂಕ : 25-7-2015.

## ಪರಿವಿಡಿ

- ದೃಢೀಕರಣ ಪತ್ರ
- ಪ್ರಮಾಣ ಪತ್ರ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ

**ಪ್ರವೇಶ :**

ಕನ್ನಡ ಸಾಹಿತ್ಯಕ್ಕೆ ಒಂದು ಸಾವಿರ ವರುಷಗಳಿಗಿಂತ ಮಿಗಿಲಾದ ಇತಿಹಾಸವಿದೆ. ಕನ್ನಡ ಸಾಹಿತ್ಯದ ಮೇಲೆ ಇಂಗ್ಲೀಷ ಸಾಹಿತ್ಯದ ಪ್ರಭಾವದಿಂದಾಗಿ ಹಲವಾರು ಸಾಹಿತ್ಯ ರೂಪುಗಳು ನಿರ್ಮಾಣವಾದವು. ಅದರಂತೆ ಮಕ್ಕಳ ಸಾಹಿತ್ಯ ರಚನೆಯಲ್ಲೂ ಕನ್ನಡದಲ್ಲಿ ಮಕ್ಕಳ ಸಾಹಿತ್ಯ ರಚನೆಗೆ ಚಾಲನೆ ದೊರೆಯಿತು. ಮಕ್ಕಳ ಸಾಹಿತ್ಯಕ್ಕೆ ಒಂದನೂರಾ ಐವತ್ತು ವರ್ಷಗಳ ಇತಿಹಾಸವಿದೆ. ಪ್ರೌಢ ಸಾಹಿತ್ಯಕ್ಕೆ ಜಾನಪದ ಸಾಹಿತ್ಯವೇ ಮೂಲ ಪ್ರೇರಣೆಯಾದಂತೆ ಮಕ್ಕಳ ಸಾಹಿತ್ಯಕ್ಕೂ ಅದುವೇ ಮೂಲ. ಮಕ್ಕಳ ಸಾಹಿತ್ಯಸೃಷ್ಟಿ ಸುಲಭವಲ್ಲ. ಮಕ್ಕಳ ಸಾಹಿತ್ಯದ ಲೇಖಕ ಮಕ್ಕಳ ಮಟ್ಟಕ್ಕೆ ಇಳಿಯುವುದೇ ಒಂದು ಕಲೆ. ಮಕ್ಕಳ ಭಾವನಾತ್ಮಕ ಮನಸ್ಸಿನ ಸ್ಥಿತಿಯೇ ಬೇರೆಯಾಗಿರುತ್ತದೆ. ಅವರ ಚಟುವಟಿಕೆಗಳು ಬೇಕು, ಬೇಡಗಳು, ಹಟದ ಕ್ರಿಯೆಗಳು, ಹರ್ಷದ ಲಾಲಿತ್ಯಗಳು, ಒಮ್ಮೊಮ್ಮೆ ಹಿರಿಯರನ್ನು ಮೀರಿಸುವ ಬುದ್ಧಿ ಚಾತುರ್ಯಗಳು ವಿಶೇಷವಾದವುಗಳೇ ಆಗಿರುತ್ತವೆ. ಇವೆಲ್ಲವನ್ನು ಸಾಹಿತ್ಯ ಸೃಷ್ಟಿ ಮಾಡುವವರು ಗಮನಿಸುತ್ತಿರಬೇಕಾಗುತ್ತದೆ. ಮಕ್ಕಳೊಂದಿಗೆ ಮಕ್ಕಳಾಗಿ ಬೆರೆತೂ ಇರಬೇಕಾಗುತ್ತದೆ. ಈ ನಿಟ್ಟಿನಲ್ಲಿ ಸ್ಪಂದಿಸಿದ ನಮ್ಮ ಹಿರಿಯ ಕವಿಗಳೂ ಇದ್ದಾರೆ. ಅವರಲ್ಲಿ ಕುವೆಂಪು, ಜಿ.ಪಿ.ರಾಜರತ್ನಂ ಪಂಜೆ ಮಂಗೇಶರಾಯರು, ಹರ್ಡೇಕರ ಮಂಜಪ್ಪ, ಎಂ. ಗೋವಿಂದ ಪೈ, ಹೊಯಿಸಳ, ದಿನಕರ ದೇಸಾಯಿ, ಬೇಂದ್ರೆ ಇವರೆಲ್ಲರೂ ಎದ್ದುಕಾಣುವಂಥವರು.

ಮಕ್ಕಳ ಸಾಹಿತ್ಯ ಸೃಷ್ಟಿಯು ಸದಾ ಮಕ್ಕಳೊಂದಿಗೆ ಇರುವ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಹೆಚ್ಚು ಸುಲಭವಾದದ್ದು ಎನಿಸುತ್ತದೆ. ಇಲ್ಲಿ ಶಿಕ್ಷಕ ಮಕ್ಕಳಿಗೆ ಕಲಿಸುತ್ತಲೇ ತಾನೂ ಅವರಿಂದ ಕಲಿಯಬೇಕಾದದ್ದು ಇದ್ದೇ ಇರುತ್ತದೆ. ಶಿಕ್ಷಕನ ಸೂಕ್ಷ್ಮಾವಲೋಕನಶಕ್ತಿ, ಚಿಂತನಶೀಲತೆ, ಮಕ್ಕಳ ಸಾಹಿತ್ಯ ಸೃಷ್ಟಿಗೆ ದಾರಿಮಾಡಿಕೊಡುತ್ತವೆ.

ಮಕ್ಕಳ ಮಾನಸಿಕ, ಬೌದ್ಧಿಕ, ಬೆಳವಣಿಗೆ ಹಾಗೂ ಅವರ ಸರ್ವಾಂಗೀಣ ಅಭಿವೃದ್ಧಿಯ ಸಲುವಾಗಿ ಹಾಗೂ ಪ್ರಜ್ಞಾವಂತ ನಾಗರೀಕರನ್ನು ರೂಪಿಸುವುದೇ ಮಕ್ಕಳ ಸಾಹಿತ್ಯದ ಉದ್ದೇಶವಾಗಿದೆ.

**ಉದ್ದೇಶ :**

'ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯ ಒಂದು ಅಧ್ಯಯನ' ಪ್ರಸ್ತುತ ಪ್ರಬಂಧಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಸಂಪೂರ್ಣವಾಗಿ ಗುಜಗೊಂಡರು ಬರೆದ ಕವಿತಾ

ಸಂಕಲನಗಳು, ಕಥಾ ಸಂಕಲನಗಳು, ಜೀವನ ಚರಿತ್ರೆ ಮುಂತಾದ ಅವರ ಸಾಹಿತ್ಯವನ್ನು ಸಮಗ್ರವಾಗಿ ಅಧ್ಯಯನ ಮಾಡಿ, ಮಕ್ಕಳ ಸಾಹಿತ್ಯ ಬೆಳೆದು ಬಂದ ಬಗೆ, ಮಕ್ಕಳ ಸಾಹಿತ್ಯ ಅಂದರೆ ಹೇಗಿರಬೇಕು, ಅವರ ಕೃತಿಗಳಲ್ಲಿನ ವೈಶಿಷ್ಟ್ಯತೆ, ಅವರ ವಿಚಾರಧಾರೆಗಳು, ಅಲ್ಲಿಯ ಮಕ್ಕಳಿಗಾಗಿ ಹೇಳಿ ಕೊಟ್ಟಿರುವ ಪ್ರಮುಖ ಅಂಶಗಳು ಕೂಲಂಕುಷವಾಗಿ ಅಧ್ಯಯನ ಮಾಡಿ ಅವರ ಕೃತಿಗಳು ಮಕ್ಕಳ ಓದಿಗೆ ಪೂರಕವಾಗಿವೆ, ಗಟ್ಟಿಯಾಗಿ ನಿಂತಿವೆ ಎಂಬ ನಿಟ್ಟಿನಲ್ಲಿ ಅವರ ಕುರಿತು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ.

ಮಕ್ಕಳ ಸಾಹಿತ್ಯವೆಂದರೆ 'ನುಡಿದರೆ ಮುತ್ತಿನ ಹಾರ, ತತ್ವಗಳ ಸಾರ, ವ್ಯರ್ಥ ಜಂಭ ಕೊಚ್ಚುವಿಕೆ ಅಲ್ಲಿಲ್ಲ. ಮಕ್ಕಳ ಸಾಹಿತ್ಯದಲ್ಲಿ ಹಾಳು ಹರಟೆ ಸಲ್ಲದು, "ಬಲ್ಲವರಾಡಿದ ನುಡಿ ಬೆಲ್ಲವನ್ನು ಮೆದ್ದಂತೆ" ಎಂಬ ಮಾತು ಇಲ್ಲಿ ಸಾಕ್ಷಾತ್ಕಾರವಾಗಿದೆ. ಮಕ್ಕಳ ಸಾಹಿತಿಗಳ ಮೃದು ನುಡಿಗಳು ಮಕ್ಕಳ ಮನಸ್ಸಿಗೆ ಮುಟ್ಟುತ್ತವೆ. ಮಕ್ಕಳ ಸಾಹಿತ್ಯವೆಂದರೆ ಹೇಗೆ ವ್ಯಾಖ್ಯಾನಿಸುತ್ತೇವೆ? ಒಂದು ವ್ಯಾಖ್ಯೆಯೆಂದರೆ 'ಆಡುವಾಗ, ಹಾಡುವಾಗ, ಲಯಕ್ಕೆ ಹೋಗುವ ಶಬ್ದಗಳನ್ನು ಹೊಸೆದು ಪ್ರಾಸವೇ ಪ್ರಮುಖವಾಗಿರುವ ಮಕ್ಕಳ ಬಾಯಲ್ಲೇ ಮೂಡಿಬರುವ ಹಾಡುಗಳು. ಕಥೆಗಳಾದರೆ ಅಡಗೂಲಜ್ಜಿಯ ಕತೆಗಳು, ಇಸೋಪನ ನೀತಿ ಕಥೆಗಳು, ಪಂಚತಂತ್ರದ ಕತೆಗಳು, ತೆನಾಲಿ ರಾಮಕೃಷ್ಣನ ಕತೆಗಳು ಹೆಚ್ಚು ಕಡಿಮೆ ಒಂದೇ ಪ್ರಕಾರಕ್ಕೆ ಸಂಬಂಧಿಸಿದ್ದು. ಮಕ್ಕಳ ಕಲ್ಪನಾಶಕ್ತಿಗೆ ಗರಿ ಮೂಡಿಸುವುದು ಮಕ್ಕಳ ಸಾಹಿತ್ಯದ ಪ್ರಮುಖ ಗುರಿಯಾಗಿದೆ.

"ಮಕ್ಕಳ ಸಾಹಿತ್ಯ ನಿಜವಾಗಿ ರೂಪಗೊಂಡಿದ್ದು ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದ ತರುವಾಯ. ಕ್ರಿ.ಶ. ಸುಮಾರು ೧೧೩೦ರಲ್ಲಿದ್ದ ದುರ್ಗಸಿಂಹನು ಸಂಸ್ಕೃತದಲ್ಲಿದ್ದ ಪಂಚತಂತ್ರವನ್ನು ಕರ್ನಾಟಕ ಪಂಚತಂತ್ರವೆಂದು ಕನ್ನಡಕ್ಕೆ ತಂದನು. ಪ್ರಾಣಿಗಳೇ ಪಾತ್ರಧಾರಿಗಳಾಗಿದ್ದು ಸರಳ ಸುಂದರ ಕಥೆಗಳು ಮಕ್ಕಳನ್ನು ಆಕರ್ಷಿಸಿದವು. ಮುಮ್ಮಡಿ ಕೃಷ್ಣರಾಜ ಒಡೆಯರು ೧೮೬೮ರಲ್ಲಿ ಪಂಚತಂತ್ರದ ಕಥೆಗಳನ್ನು ಪ್ರಕಟಿಸಿದರು. ಆಗ ಮಕ್ಕಳಿಗೆ ಒಂದು ಉತ್ತಮ ಕೈಪಿಡಿ ಲಭ್ಯವಾಯಿತು.

ಮುಂದೆ ಕನ್ನಡದ ಹಿರಿಯ ಸಾಹಿತಿಗಳು ಖ್ಯಾತ ಸಂಶೋಧಕರೂ ಆದ ಎಸ್.ಜಿ. ನರಸಿಂಹಾಚಾರ್ಯರು ೧೮೬೭ ರಲ್ಲಿ ಬಾಲ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದ್ದಾರೆ. ಇವರು ರಚಿಸಿರುವ 'ಗೋವಿನ ಬಾಳು', 'ಹೊಗೆಯ ಗಾಡಿ' ಅತ್ಯಂತ ಜನಪ್ರಿಯ ಕೃತಿಗಳು. ಮಕ್ಕಳೂ ಕೂಡಾ ಇಂತಹ ಕವಿತೆಗಳನ್ನು ಆಸಕ್ತಿಯಿಂದಲೇ ಸ್ವೀಕರಿಸುತ್ತಿದ್ದರು. ಇಂದಿಗೂ ಸಹ ಅವುಗಳಲ್ಲಿರುವ ಪದ್ಯಗಳನ್ನು ಪಠ್ಯಪುಸ್ತಕದಲ್ಲಿ ಅಳವಡಿಸಲಾಗಿದೆ. ಮಕ್ಕಳ ಕಂಠಪಾಠಕ್ಕೂ ಬಳಸುವ ರೂಢಿಯಿದೆ.

ಮಕ್ಕಳ ಮನೋಭೂಮಿಕೆಯ ಹದವನ್ನು ನವಿರಾದ ಬಯಕೆಯನ್ನು ಅರ್ಥಮಾಡಿಕೊಂಡು ಅವರನ್ನು ಪ್ರಫುಲ್ಲಗೊಳಿಸುವಂತೆ ಅಷ್ಟೇ ರಸವತ್ತಾಗಿ ಬರೆದ

ಮಹತ್ವದ ಮಕ್ಕಳ ಸಾಹಿತ್ಯದ ಅಗ್ರಗಣ್ಯರೆಂದರೆ ಪಂಜೆ ಮಂಗೇಶರಾಯರು. ಮಕ್ಕಳು ಹಾಡಿ ಕುಣಿಯುವಂತಹ ಕವನ, ಕಥೆಗಳನ್ನು ಕೊಟ್ಟ ಆಚಾರ್ಯಪುರುಷ. ಮಕ್ಕಳಿಗಾಗಿಯೇ ತಮ್ಮ ಸಾಹಿತ್ಯಪ್ರಭೆಯನ್ನು ಮೀಸಲಿರಿಸಿದ ಅಪರೂಪದ ಸಾಹಿತಿ ಅವರು.

"ಮಕ್ಕಳ ಸಾಹಿತ್ಯವೆಂದರೆ ಮಕ್ಕಳು ಓದುವ ಸಾಹಿತ್ಯವೆಂದು ಹೇಳುತ್ತೇವೆ. ಮಕ್ಕಳಿಗಾಗಿ ಹಿರಿಯರು ಬರೆದ ಹಾಗೂ ಮಕ್ಕಳು ಮಕ್ಕಳಿಗಾಗಿಯೇ ಬರೆದ ಸಾಹಿತ್ಯವೆಂದೂ ಹೇಳುತ್ತೇವೆ. ಮಕ್ಕಳ ಸಾಹಿತ್ಯವನ್ನು ಬರೆಯುವುದೆಂದರೆ ಬಹಳ ಕಷ್ಟದ ಕೆಲಸ. ಬೆರಳೆಣಿಕೆಯಷ್ಟು ಮಾತ್ರ ಮಕ್ಕಳ ಸಾಹಿತಿಗಳು ಆಗಿ ಹೋಗಿದ್ದಾರೆ. ಅವರಲ್ಲಿ ಮೇವುಂಡಿ ಮಲ್ಲಾರಿ, ಸಿದ್ದಯ್ಯ ಪುರಾಣಿಕ, ಹೊಯ್ಸಳ, ಪಂಜೆ ಮಂಗೇಶರಾಯ, ಗೋವಿಂದ ಪೈ, ಜೆ.ಪಿ. ರಾಜರತ್ನಂ, ಕುವೆಂಪು, ಬೇಂದ್ರೆ, ದಿನಕರ ದೇಸಾಯಿ, ಸಿ.ಸು. ಸಂಗಮೇಶ, ಜಿ.ಎನ್. ಲಕ್ಷ್ಮಣ ಪೈ ಇಂತಹ ಮಕ್ಕಳ ಸಾಹಿತಿಗಳು ಬೆಳೆಯುತ್ತಾ ಬಂದಂತೆ ಶಂ.ಗು. ಬಿರಾದಾರ, ಈಶ್ವರಚಂದ್ರ ಚಿಂತಾಮಣಿ, ಈಶ್ವರ ಕಮ್ಮಾರ, ಕಚ್ಯಾಣಿ ಶರಣಪ್ಪ, ಇಂತಹ ಮಕ್ಕಳ ಸಾಹಿತಿಗಳು ಬರೆದ ಮಕ್ಕಳ ಸಾಹಿತ್ಯವನ್ನು ಓದಬೇಕಾಗಿದೆ, ಬೆಳೆಸಬೇಕಾಗಿದೆ. ಉತ್ತರ ಕರ್ನಾಟಕದಲ್ಲಿ ಮಕ್ಕಳ ಸಾಹಿತಿಗಳ ಪಾತ್ರ ಬಹಳ ಹಿರಿದಾಗಿದೆ. ಮಕ್ಕಳ ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ಮಕ್ಕಳ ಸಾಹಿತ್ಯದ ಅವಶ್ಯಕತೆಯಿದೆ. ಮಕ್ಕಳ ಮನಸ್ಸನ್ನು ಆಕರ್ಷಿಸಿ ಅವರ ಕುತೂಹಲವನ್ನು ಕೆರಳಿಸಿ ಅವರ ಬೌದ್ಧಿಕ ಮಟ್ಟವನ್ನು ಬೆಳವಣಿಗೆ ಮಾಡುವ ನಿಟ್ಟಿನಲ್ಲಿ ಮಕ್ಕಳ ಸಾಹಿತ್ಯದ ಮುಖ್ಯ ಉದ್ದೇಶವಾಗಿದೆ. ಮಕ್ಕಳ ಸಾಹಿತ್ಯ ರಚನೆ ತುಂಬಾ ಕ್ಲಿಷ್ಟಕರವಾದದ್ದು. ಮಕ್ಕಳ ಒಡನಾಟದಲ್ಲಿದ್ದವರು ಅವರ ಮನಸ್ಸನ್ನು ಅರಿತು ಅವರ ಆಶೋತ್ತರಗಳಿಗೆ ಸ್ಪಂದಿಸಿ ಸಾಹಿತ್ಯ ಬರೆಯಬಹುದು.

ಜ್ಞಾನದ ಹಂಬಲ ಪ್ರತಿಯೊಬ್ಬರಿಗಿದ್ದು, ಹಲವು ರೂಪಗಳಲ್ಲಿ ತೋರುತ್ತದೆ. 'ಜ್ಞಾನದ ಬಲದಿಂದ ಅಜ್ಞಾನದ ಕೇಡು ನೋಡಾ' ಎಂಬ ಮಾತು ಬಸವಣ್ಣನವರು ಹೇಳಿದ್ದುಂಟು. ಈ ಮಾತು ಆಧುನಿಕ ಜ್ಞಾನಕ್ಕೂ ಅವಲಂಬಿಸುತ್ತದೆ. ಇಪ್ಪತ್ತನೆಯ ಶತಮಾನ ಕಳೆದುಹೊಸ ಸಹಸ್ರಮಾನದಲ್ಲಿರುವ ನಮಗೆ ಹಲವು ಬಗೆಯ ತೊಡಕುಗಳು ಮತ್ತು ಸಂಕಟಗಳು ಉಂಟು. ಒಂದು ಕಡೆ ಇಪ್ಪತ್ತನೆಯ ಶತಮಾನ ಸಾಹಿತ್ಯಿಕವಾಗಿ ಸಮೃದ್ಧವಾದ ಕಾಲವೇನೋ ನಿಜ. ಮೂಲಜ್ಞಾನದ ಬೇರುಗಳು ಹೊರಹೊಮ್ಮಿ ಹಲವು ಬಗೆಯ ವೈವಿಧ್ಯಗಳಿಂದ ವಿರಾಜಮಾನವಾದ ಕಾಲವೂ ಆಗಿದೆ. ಸಾಹಿತ್ಯಿಕವಾಗಿ ಎಷ್ಟು ಸಮೃದ್ಧವೋ ಸಾಂಸ್ಕೃತಿಕವಾಗಿಯೂ ಅಷ್ಟೇ ಬಗೆಯ ವಾಗ್ವಾದ ಮತ್ತು ಸಂವಾದಗಳಿಂದ ಕೂಡಿದ ಕಾಲವಾಗಿದೆ. ಅನೇಕ ತಳವರ್ಗದ ಜನಸ್ಥಾನಗಳು ಮೊದಲ ಬಾರಿಗೆ ಅಕ್ಷರಸೂರ್ಯನಿಗೆ ನಮಸ್ಕರಿಸಿದ್ದು, ಜ್ಞಾನಾರ್ಜನೆ ಎಂಬುದು ಒಂದು ಶೈಕ್ಷಣಿಕ ಶಿಸ್ತಾಗಿದೆ. ಇದು ಸಮಾಜದ ಅವಿರತ ಹಾಗೂ ಸದಾಕಾಲ ಹಂಬಲಿಸುವ ಆಶಯ ಆಗಬೇಕು. ಆ ಆಶಯ, ಹಂಬಲ, ಹಲವು ಬಗೆಯ ಸಂಕೇತಗಳಲ್ಲೋ, ರೂಪಕಗಳಲ್ಲೋ ಕಾಣಿಸುತ್ತದೆ. ಪಾರಂಪರಿಕ ಜ್ಞಾನ ಮತ್ತು ಆಧುನಿಕ ಜ್ಞಾನ ಇವೆರಡೂ ಬೇರುಗಳನ್ನು ಕಸಿ ಹಾಕುವ ಅಗತ್ಯ ನಮ್ಮ ಮುಂದಿದೆ.

ಪಾರಂಪರಿಕ ಜ್ಞಾನವು ಕೇವಲ ಸಾಹಿತ್ಯಿಕ ಸಮೃದ್ಧತೆಯ ಕಡೆಗೆ ಮಾತ್ರ ಬೊಟ್ಟುಮಾಡಿ ತೋರಿಸುತ್ತದೆ. ಸಮಾಜ, ಸಮುದಾಯಗಳಿಗೆ ಬೇಕಾದ ಹಲವು ಬಗೆಯ ಜ್ಞಾನದ ಕೌಶಲ್ಯಗಳು ನಮ್ಮಲ್ಲಿ ಹಿಂದೆ ಇದ್ದವು. ೧೮೨೦ ರಲ್ಲಿ ಅತ್ಯುತ್ತಮ ತಾಂತ್ರಿಕ ಜ್ಞಾನ ನಮ್ಮಲ್ಲಿದ್ದುದನ್ನು ತಿಳಿದುಕೊಂಡಾಗ ಅದಕ್ಕೆ ನಾವು ಸರಿಯಾಗಿ ಹೊಂದಿಕೊಂಡು ಹೋಗದೆ ಇದ್ದುದರಿಂದ ನಾವಿಂದು ಹಲವು ಬಗೆಯ ಸ್ಮೃತಿಗಳಿಂದ ಹೊರಗುಳಿದಿದ್ದೇವೆ. ನಮ್ಮ ಸಂಸ್ಕೃತಿ, ಸಮುದಾಯಗಳು ಪಡೆದಿರುವ ಕೌಶಲ್ಯ, ಜ್ಞಾನ ಸಂಪತ್ತನ್ನು ಸಮಕಾಲೀನ ಅಗತ್ಯಗಳಿಗೆ ತಕ್ಕಂತೆ ಮರುಜೋಡಣೆ ಮಾಡುವ ಅಗತ್ಯವಿದೆ. ಇಲ್ಲದೆ ಹೋದರೆ ಕಳೆದುಹೋದ ಕಾಲವು ನಿರ್ವಾತವಾಗಿತ್ತೆಂದೂ ಬರುವ ಕಾಲ ಈ ನಿರ್ವಾತವನ್ನು ತುಂಬುವ ಹಂಬಲವನ್ನು ಹೊತ್ತಿರುವುದೆಂದೂ ತಿಳಿಯುವ ಕಷ್ಟದಲ್ಲಿ ಮುಳುಗಬೇಕಾಗುತ್ತದೆ. ಈ ಅಜ್ಞಾನದಿಂದ ಎಚ್ಚರಗೊಳ್ಳಬೇಕಾಗಿದೆ. ಎಚ್ಚರಿಸುವ ಕಾರ್ಯವನ್ನು ನಾಡಿನ ಹಲವಾರು ಸಾಂಸ್ಕೃತಿಕ ಸಂಸ್ಥೆಗಳು ಮಾಡುತ್ತಿವೆ.

"ಮಕ್ಕಳ ಸಾಹಿತ್ಯದಲ್ಲಿ ಬಳಸುವ ಭಾಷೆ, ವಿಷಯ, ವಿಚಾರ, ಲಯ, ಪ್ರಾಸ, ರೇಖಾಚಿತ್ರ, ಮಕ್ಕಳ ವಯೋಮಾನಕ್ಕೆ ತಕ್ಕಂತೆ ಅವರ ಮನಸ್ಸಿಗೆ ಮುದ ನೀಡುವಂತೆ ಮಕ್ಕಳ ಭಾವನೆಗಳು ವ್ಯಕ್ತವಾಗುವಂತಿರಬೇಕು. ಸಭ್ಯತೆಗಳು ಮಕ್ಕಳ ಸಾಹಿತ್ಯದ ಮೂಲ ಅವಶ್ಯಕತೆಯಾಗಿವೆ. ಮಕ್ಕಳ ಸಾಹಿತ್ಯದ ರಚನೆಗೆ ಪೂರಕವಾದುದು ಎಂದರೆ ಚಿತ್ರದ ಕೆಲಸ, ಮಕ್ಕಳ ಸಾಹಿತ್ಯವನ್ನು ಒಂದು ಪೂರ್ಣ ಪ್ರಮಾಣದ ಸಾಹಿತ್ಯ ಎಂದು ಸಿ.ಸು. ಸಂಗಮೇಶರು ಪ್ರತಿಪಾದಿಸಿದ್ದು ಸರಿಯಾಗಿಯೇ ಇದೆ.

ಕನ್ನಡ ಮಕ್ಕಳ ಸಾಹಿತ್ಯದ ಆರಂಭ ಕಾಲವನ್ನು ಗೆರೆ ಎಳೆದು ಕೇಳುವುದು ಸಾಧ್ಯವಿಲ್ಲ. ಏಕೆಂದರೆ ಮೌಖಿಕ ಪರಂಪರೆಯಲ್ಲಿ ಅನಾದಿ ಕಾಲದಿಂದ ಸಾಗಿ ಬಂದ ಲಾಲಿ ಪದಗಳು, ಹಂತಿ ಹಾಡುಗಳು, ಕೋಲಾಟ ಪದಗಳು, ಒಗಟುಗಳು, ಅಜ್ಜ-ಅಜ್ಜಿಯರು ಹೇಳಿದ ಕಥೆಗಳು ಮಕ್ಕಳ ಮನಸ್ಸನ್ನು ಆಕರ್ಷಿಸಿವೆ, ರಂಜಿಸಿವೆ. ಜಾನಪದವೇ ನಮ್ಮ ಮಕ್ಕಳ ಸಾಹಿತ್ಯಕ್ಕೂ ತಾಯಿ. ಭಾರತದ ಮೊಟ್ಟ ಮೊದಲ ಅಚ್ಚಿನ ಯಂತ್ರವನ್ನು ಪೋರ್ಚುಗೀಸರು ೧೫೫೯ ರಲ್ಲಿ ಗೋವಾದಲ್ಲಿ ಪ್ರಾರಂಭಿಸಿದರು. ಅದೇ ವೇಳೆಯಲ್ಲಿ ಬಾಸೆಲ್ ಮಿಷನ್ ಸಂಸ್ಥೆಯ ಮೂಲಕ "ಬಾಲಬೋಧಿನಿ" ಎಂಬ ಕನ್ನಡದ ಮೊಟ್ಟ ಮೊದಲ ಅಚ್ಚಿನ ಪುಸ್ತಕವು ಶಾಲಾ ಮಕ್ಕಳಿಗೆ ಲಭ್ಯವಾಯಿತು. ಕರ್ನಾಟಕದಲ್ಲಿ ೧೮೩೪ ರಲ್ಲಿ ಮಂಗಳೂರಿನಲ್ಲಿ ಮುದ್ರಣಯಂತ್ರ ಸ್ಥಾಪನೆಯಾಯಿತು. ೧೮೪೨ ರಲ್ಲಿ ಜಾನ್ ಗ್ಯಾರೆಟ್ ಬೆಂಗಳೂರಿನಲ್ಲಿ ಮುದ್ರಣಾಲಯ ಸ್ಥಾಪಿಸಿದನು. ೧೮೫೩ ರಲ್ಲಿ 'ಚಿಕ್ಕವರಿಗೆ ತಕ್ಕಂತ ಪಾಠಗಳು' ಎಂಬ ಕೃತಿಯನ್ನು ಪ್ರಕಟಿಸಿದರು. ೧೮೬೫ ರಲ್ಲಿ ಪಂಚತಂತ್ರ ಕಥೆಗಳನ್ನು ಪ್ರಕಟಿಸಿದರು.

**ಸ್ವರೂಪ :**

ಪ್ರಸ್ತುತ ಪ್ರಬಂಧ ಮಂಡನೆಯ ಅಧ್ಯಯನದಲ್ಲಿ ಒಟ್ಟು ಆರು ಅಧ್ಯಾಯಗಳಾಗಿ ವರ್ಗೀಕರಿಸಲಾಗಿದೆ. ಮೊದಲನೆಯ ಅಧ್ಯಾಯದಲ್ಲಿ 'ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವಿಧಾನ ಇದರ ಕುರಿತು ವಿವರಣೆ ಕೊಡಲಾಗಿದೆ. ಎರಡನೆಯ ಅಧ್ಯಾಯದಲ್ಲಿ ಮಕ್ಕಳ ಸಾಹಿತ್ಯದ ಪಕ್ಷಿನೋಟ ನೀಡಲಾಗಿದೆ. ಮೂರನೆಯ ಅಧ್ಯಾಯದಲ್ಲಿ ಸಂಗಮೇಶ ಗುಜಗೊಂಡರ ಪದ್ಯಸಾಹಿತ್ಯ ಅವಲೋಕಿಸಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಸಂಗಮೇಶ ಗುಜಗೊಂಡರ ಗದ್ಯ ಸಾಹಿತ್ಯ (ಕಥೆ, ಚರಿತ್ರೆ) ವಿಶ್ಲೇಷಿಸಲಾಗಿದೆ. ಅಧ್ಯಾಯ ಐದರಲ್ಲಿ ಸಂಗಮೇಶ ಗುಜಗೊಂಡರ ಸಾಹಿತ್ಯದ ವೈಶಿಷ್ಟ್ಯತೆಯನ್ನು ಗುರುತಿಸಲಾಗಿದೆ. ಅಧ್ಯಾಯ ಆರರಲ್ಲಿ ಸಮಾರೋಪ ಚಿಂತನೆ ಇದೆ.

**ವ್ಯಾಪ್ತಿ :**

ಮಕ್ಕಳ ಸಾಹಿತ್ಯ ಬೆಳೆದು ಬಂದ ಬಗೆಯನ್ನು ಅವಲೋಕಿಸಲಾಗುವುದು. ಪ್ರಸ್ತುತ ಅಧ್ಯಯನಕ್ಕೆ ಆಯ್ದುಕೊಂಡಿರುವ ಪ್ರೊ. ಸಂಗಮೇಶ ಗುಜಗೊಂಡ ಅವರ ಪದ್ಯ ಸಾಹಿತ್ಯ, ಗದ್ಯ ಸಾಹಿತ್ಯ ಮತ್ತು ಇತರ ಸಾಹಿತ್ಯವನ್ನು ವಿವೇಚಿಸಿ ವಿಶ್ಲೇಷಿಸಲಾಗುವುದು. ಗುಜಗೊಂಡರ ಸೃಜನ ಮತ್ತು ಸೃಜನೇತರ ಮಕ್ಕಳ ಸಾಹಿತ್ಯವನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಲಾಗುವುದು.

'ಕವಿಯೇ ಸರ್ವರೊಳುತ್ತಮ' ಎಂದು ಕವಿ ಸೋಮನು ಹೇಳಿಯಾದ ಮೇಲೆ ಸ್ಮರಣೆಗೆ ಬರುವವರು ಶರಣ ಸಮೂಹ ಆಕಾಂಕ್ಷಿ ಮಕ್ಕಳ ಮನಸ್ಸು ಮತ್ತು ಸಾಹಿತ್ಯವೆಂಬ ಎರಡು ಲೋಹಗಳನ್ನು ಬೆಸೆದ ಮಕ್ಕಳ ಸಾಹಿತ್ಯ ರಚಿಸಿದ ಪಂಜೆ ಮಂಗೇಶರಾಯರು, ಜಿ.ಪಿ.ರಾಜರತ್ನಂ, ದೇವುಡು, ಹೊಯಿಸಳ, ದಿನಕರ ದೇಸಾಯಿ, ಶಿವರಾಮ ಕಾರಂತ, ಕುವೆಂಪು, ಬೇಂದ್ರೆ, ಮೇವುಂಡಿ ಮಲ್ಲಾರಿ, ಸಿದ್ದಯ್ಯ ಪುರಾಣಿಕ ಇವರಿಂದ ಹಿಡಿದು ನಂತರ ತಲೆಮಾರಿನ ಉತ್ತರ ಕರ್ನಾಟಕದ ಭಾಗದ ಮಕ್ಕಳ ಸಾಹಿತಿಗಳಾದ ಈಶ್ವರಚಂದ್ರ ಚಿಂತಾಮಣಿ, ಶಂ.ಗು. ಬಿರಾದಾರ, ಸಿ.ಸು. ಸಂಗಮೇಶ, ಕಂಚ್ಯಾಣಿ ಶರಣಪ್ಪ, ಈಶ್ವರ ಕಮ್ಮಾರ, ಜಯವಂತ ಕಾಡದೇವರ, ಎ.ಕೆ. ರಾಮೇಶ್ವರ, ಚಂದ್ರಗೌಡ ಕುಲಕರ್ಣಿ, ಜಂಬುನಾಥ ಕಂಚ್ಯಾಣಿ, ಫ.ಗು.ಸಿದ್ಧಾಪೂರ, ಚನ್ನಬಸಪ್ಪ ಹೊಸಮನಿ, ನಾ ಡಿಸೋಜ. ಬಿ.ಎ. ಸನದಿ ಹೀಗೆ ಹೇಳುತ್ತ ಹೋದರೆ ಪಟ್ಟಿ ಬೆಳೆಯುತ್ತದೆ. ಇವರೆಲ್ಲರು ಮಕ್ಕಳ ಸಾಹಿತ್ಯವನ್ನು ಶ್ರೀಮಂತಗೊಳಿಸುವಲ್ಲಿ ಶ್ರಮಿಸಿದರು.

ಮಕ್ಕಳ ಸಾಹಿತ್ಯಕ್ಕೆ ಅರ್ಪಣ ಮನೋಭಾವದಿಂದ ಸಂಪೂರ್ಣವಾಗಿ ತೊಡಗಿಸಿಕೊಂಡು ಮಕ್ಕಳ ಸಾಹಿತ್ಯ ಕೃಷಿ ಮಾಡಬೇಕು. ಬದುಕಿನುದ್ದಕ್ಕೂ ಅದನ್ನೇ ಉಸಿರಾಡಿ ಧನ್ಯತಾ ಮನೋಭಾವ ಹೊಂದಬೇಕು. ಕಥೆಗಳು, ಕವಿತೆಗಳು, ಬರೆಯುವಾಗ ನೀತಿ ಎಲ್ಲೂ ನೇರವಾಗಿ ಮತ್ತು ಭಾರವಾಗಿ ಮೂಡಿ ಬರಬಾರದು. ಮಕ್ಕಳಿಗೆ ಸಾಹಿತ್ಯದ

ಮೂಲಕ ಜ್ಞಾನ ಸಂಪಾದನೆ, ತಿಳುವಳಿಕೆ ಆಗಬೇಕೆಂಬುದು ಮಕ್ಕಳ ಸಾಹಿತಿಗಳ ನಿಲುವು. ಅವರ ವಯೋಮಾನಕ್ಕೆ ತಕ್ಕಂತೆ ಶಬ್ದಸಂಪತ್ತು, ಕಲ್ಪನೆ ಮತ್ತು ವಿಚಾರಗಳಿಗೆ ಸರಿ ಹೊಂದುವಂತಹ ಮಕ್ಕಳ ಸಾಹಿತ್ಯ ರಚನೆ ಮಾಡಬೇಕು. ಮಕ್ಕಳ ಸಾಹಿತ್ಯ ಬರೆಯುವಾಗ ಅಲ್ಲಿ ಚಿತ್ರಶೈಲಿ, ಶಬ್ದಗಳ ಸರಳೀಕರಣಕ್ಕೆ ಹೆಚ್ಚು ಒತ್ತು ಕೊಡಬೇಕು. ಮಕ್ಕಳಿಗೆ ಬಹುಕಾಲ ನೆನಪಿಟ್ಟುಕೊಳ್ಳುವಂತಹ ಕತೆಗಳು, ಕವಿತೆಗಳನ್ನು ರಚಿಸಬೇಕು. ಮಕ್ಕಳ ಸಾಹಿತ್ಯ ಕಥೆ, ಕವಿತೆ, ಜೀವನಚರಿತ್ರೆ, ಪ್ರವಾಸ ಕಥನ, ಇವೆಲ್ಲವುಗಳು ಒಳಗೊಂಡಿರಬೇಕು. ಮಕ್ಕಳ ಸಾಹಿತ್ಯವನ್ನು ಪರಿಪೂರ್ಣ ಸಾಹಿತ್ಯವಾಗಿ ಬೆಳೆಸಬೇಕಾದುದು ಮಕ್ಕಳ ಸಾಹಿತಿಗಳ ಜವಾಬ್ದಾರಿ ಹಾಗೂ ಅನಿವಾರ್ಯತೆ ಕೂಡಾ ಆಗಿದೆ. ಒಟ್ಟಾರೆಯಾಗಿ ಮಕ್ಕಳ ಸಾಹಿತ್ಯ ಸೃಜನಶೀಲತೆಯಿಂದ ರಚನೆ ಮಾಡಿ ಕನ್ನಡ ಸಾಹಿತ್ಯಕ್ಕೆ ದೊಡ್ಡ ಕೊಡುಗೆಯಾಗಿ ನೀಡಬೇಕಾಗಿದೆ. ಮಕ್ಕಳ ಸಾಹಿತ್ಯ ಮಕ್ಕಳ ಜ್ಞಾನ, ಸೃಜನಶೀಲತೆಯ ಕ್ಷಿತಿಜವನ್ನು ವಿಸ್ತರಿಸುವುದರ ಮೂಲಕ ಸುಸಂಸ್ಕೃತ ವ್ಯಕ್ತಿತ್ವವನ್ನು ರೂಪಿಸಲು ಮಕ್ಕಳ ಸಾಹಿತ್ಯ ರಚನೆ ಮಾಡುವುದು ಒಂದು ಅದ್ಭುತ ವಿಧಾನವೆಂದೇ ಹೇಳಬಹುದು.

**ವಿಧಾನ :**

ಗುಜಗೊಂಡ ಅವರ ಕೃತಿಗಳನ್ನು ಸಂಗ್ರಹಿಸುವುದು. ಅವರ ಕೃತಿಗಳ ಕುರಿತಾಗಿ ಬಂದಿರುವ ವಿಮರ್ಶೆ ಪರಿಚಯಗಳನ್ನು ಸಂಕಲಿಸುವುದು, ಮಕ್ಕಳ ಸಾಹಿತ್ಯದಲ್ಲಿ ಕೃಷಿ ಮಾಡಿರುವ ಶಿಶು ಸಾಹಿತಿಗಳನ್ನು ಸಂದರ್ಶಿಸುವುದು, ವಿಷಯ ಪರಿಣಿತರ ಜೊತೆಗೆ ಸಂವಾದ ಮಾಡುವುದು, ಗುಜಗೊಂಡ ಅವರ ಸಂದರ್ಶನ ಮಾಡುವುದು. ಈ ರೀತಿಯಾಗಿ ಸಂಗ್ರಹಿಸಿದ ಮಾಹಿತಿಯೆಲ್ಲವನ್ನೂ ಒಗ್ಗೂಡಿಸಿ, ಕ್ರಮಬದ್ಧವಾಗಿ ವಿಭಜಿಸುವುದು. ವಿವರಿಸುವ ವ್ಯಾಖ್ಯಾನಿಸುವ, ಸಾಂದರ್ಭಿಕವಾಗಿ ವಿವೇಚಿಸುವ, ಅವಶ್ಯವಿದ್ದೆಡೆ ವಿಶ್ಲೇಷಣೆ ಮಾಡಲಾಗುವುದು. ಮಾರ್ಗದರ್ಶಕರ ಸಲಹೆ–ಸೂಚನೆಗಳನ್ನು ಪರಿಗಣಿಸಿ ಪ್ರಸ್ತುತ ಪ್ರಬಂಧಕ್ಕೆ ಅಂತಿಮ ರೂಪ ನೀಡಲಾಗಿದೆ. ಈ ವಿಧಾನದಿಂದ ಪ್ರಸ್ತುತ ಸಂಗಮೇಶ ಗುಜಗೊಂಡ ಅವರ ಮಕ್ಕಳ ಸಾಹಿತ್ಯ : ಒಂದು ಅಧ್ಯಯನವನ್ನು ಕಟ್ಟಿಕೊಡಲಾಗಿದೆ.

* * * * *

# ಅಧ್ಯಾಯ : ಎರಡು

# ಮಕ್ಕಳ ಸಾಹಿತ್ಯದ ಪಕ್ಷಿನೋಟ

**ಪ್ರವೇಶ :**

ಮಕ್ಕಳ ಸಾಹಿತ್ಯ ರಚನೆ ತುಂಬಾ ಕ್ಲಿಷ್ಟಕರವಾದದ್ದೇ. ಮಕ್ಕಳ ಒಡನಾಟದಲ್ಲಿದ್ದು ಅವರ ಮನೋಲೋಕ ಪ್ರವೇಶಿಸಿ ಅವರ ಅಪೇಕ್ಷೆ ಆಶೋತ್ತರಗಳಿಗೆ ಮಿಡಿಯಬಲ್ಲ ಸಾಹಿತ್ಯ ರಚಿಸುವುದು ಸುಲಭದ ಮಾತಲ್ಲ. ಇದು ಸಿದ್ಧಿಸುವುದು ಕೆಲವರಿಗೆ ಮಾತ್ರ, ಅನೇಕ ಸಾಹಿತಿಗಳು ಶ್ರೇಷ್ಠ ಮಕ್ಕಳ ಸಾಹಿತ್ಯವನ್ನು ರಚಿಸಿದ್ದಾರೆ. ಮಕ್ಕಳ ಸಾಹಿತ್ಯದ ಆದ್ಯರಲ್ಲಿ ನೆನೆಯಬೇಕಾದವರೆಂದರೆ, ಎಸ್.ಜಿ. ನರಸಿಂಹಾಚಾರ್ಯ, ಜಯರಾಮಾಚಾರ್ಯ, ಹಟ್ಟಿಯಂಗಡಿ ನಾರಾಯಣರಾಯ, ಶಾಂತಕವಿ, ಗೋವಿಂದ ಪೈ, ಗೌರೀಶ, ಮ.ಪ್ರ.ಪೂಜಾರ, ಸಿ.ಫ. ಕಟ್ಟೀಮನಿ, ಹರ್ಡೇಕರ ಮಂಜಪ್ಪ, ಎಂ.ಎಸ್. ಕಾಮತ್, ಕೊರಡ್ಕಲ್ ಶ್ರೀನಿವಾಸರಾಯರು, ಐರೋಡಿ ಶಿವರಾಮಯ್ಯ, ವೈ.ಎನ್. ಗುಂಡಪ್ಪ, ಪಂಜೆ ಮಂಗೇಶರಾಯರು, ಮೇವುಂಡಿ ಮಲ್ಹಾರಿ, ಸಾಲಿ ರಾಮಚಂದ್ರರಾಯರು, ಪಂಡಿತ ಚ.ಎ. ಕವಲಿ, ಸುಬೋಧ ರಾಮರಾಯರು, ಬಾದಾಮಿ ಕೃಷ್ಣರಾವ್, ಜಂಗಮಕೋಟೆ ಕೃಷ್ಣಶಾಸ್ತ್ರಿಗಳು, ಗದಿಗೆಯ್ಯ ಹೊನ್ನಾಪುರಮಠ, ಗಂಗಾಧರ ಮಡಿವಾಳೇಶ್ವರ, ತುರಮುರಿ ಎಂ.ಎಸ್. ಪುಟ್ಟಣ್ಣ, ದಿನಕರ ದೇಸಾಯಿ, ಜಿ.ಪಿ. ರಾಜರತ್ನಂ, ಡಿ.ವಿ.ಜಿ. ಹೀಗೆ ಮುಂತಾದವರು ಹಿರಿಯ ಮಕ್ಕಳ ಸಾಹಿತಿಗಳು ಈ ಕ್ಷೇತ್ರದಲ್ಲಿ ಸಾಧನೆ ಮಾಡಿದ್ದಾರೆ.

**ಅವಲೋಕನ :**

ಮಕ್ಕಳ ಸಾಹಿತ್ಯದ ದಿಗ್ಗಜರಲ್ಲೊಬ್ಬರಾದ ದಿ. ಹೊಯ್ಸಳರು ಮಕ್ಕಳಿಗೆ ಯಾವ ಸಾಹಿತ್ಯದಲ್ಲಿ ಆಸಕ್ತಿ ಇದೆ ಎಂಬುದನ್ನು ಸೂಕ್ಷ್ಮವಾಗಿ ಗಮನಿಸಿ ತಮ್ಮ 'ಪುಸ್ತಕದಂಗಡಿ' ಕವಿತೆಯಲ್ಲಿ ಹೀಗೆ ಹೇಳಿದ್ದಾರೆ.

'ಪುಸ್ತಕದಂಗಡಿಗೆ ಓಡಿದನು ಹುಡುಗ
ಚಿತ್ರದ ಪುಸ್ತಕಗಳೊಟ್ಟೊಟ್ಟಾಗಿ ಕರೆಯೇ
ರೇಶಿಮೆಯ ಮಕಮಲ್ಲ ಬಂಗಾರ ಬೈಂಡಿನವು
ಪುಟ್ಟಯ್ಯ ಮುಟ್ಟು ಬಾ ಬಗಲೊಳಗೆ ಇಟ್ಟು
ನುಣ್ಣನೆಯ ಬಣ್ಣನೆಯ ಹೊಳೆ ಹೊಳೆವ ಗೆಳೆಯರನು'[೧]

---

[೧] ಹೊಯ್ಸಳ, ಪುಸ್ತಕದಂಗಡಿ.

ಮಕ್ಕಳಿಗೆ ಪದ್ಯಗಳು, ಕಥೆಗಳು, ಪುರಾಣ ಮತ್ತು ಇತಿಹಾಸ ಮಹಾಪುರುಷರ ವೀರ ಕಥೆಗಳು ಮಕ್ಕಳಿಗೆ ರುಚಿಸುತ್ತವೆ, ಓಡಿಸುತ್ತವೆ ಎಂಬುದನ್ನು ಸೂಚ್ಯವಾಗಿ ಹೊಯ್ಸಳರು ಇಲ್ಲಿ ಹೇಳಿದ್ದಾರೆ.

ಆಧುನಿಕ ಸಾಹಿತ್ಯ, ನವೋದಯ, ಪ್ರಗತಿಶೀಲ, ನವ್ಯ, ಬಂಡಾಯ, ದಲಿತ, ಸ್ತ್ರೀವಾದಿ, ಸಾಹಿತ್ಯವೆಂಬ ಮಜಲುಗಳನ್ನು ಗುರುತಿಸಿಕೊಂಡು ಬೆಳೆಯಿತು. ಅದಕ್ಕೆ ತನ್ನದೇ ಆದ ಹಿನ್ನೆಲೆ, ಪ್ರೇರಣೆ, ಪ್ರಭಾವ, ಸ್ವರೂಪಗಳಿರುವುದಾದರೂ ಸೂಕ್ಷ್ಮತೆ ಕವಿತೆಯ ಜತೆಗೆ ಕಾದಂಬರಿ, ಪ್ರಬಂಧ, ಜೀವನ ಚರಿತ್ರೆ, ಅನುವಾದ, ವಿಜ್ಞಾನ ಸಾಹಿತ್ಯದಂಥ ಹೊಸ ಪ್ರಕಾರಗಳು ಸೇರಿಕೊಂಡವು. ಮಕ್ಕಳ ಸಾಹಿತ್ಯ ಇದರಿಂದ ವಿಸ್ತೃತವಾಯಿತೆ ವಿನಃ ನಿರ್ದಿಷ್ಟ ಪಂಥ ಅಥವಾ ಮಜಲಿಗೆ ಸೇರಲಿಲ್ಲ. ಆದರೆ ಮಕ್ಕಳ ಸಾಹಿತ್ಯ ನವೋದಯ ಸಂದರ್ಭದಲ್ಲಿ ಒಂದಿಷ್ಟು ಸಮೃದ್ಧವಾಗಿ ಉಳಿದ ಮಜಲುಗಳ ಸಂದರ್ಭದಲ್ಲಿ ರಚನೆಯಾಗಲಿಲ್ಲ. ಅಂದಿನ ಅಗತ್ಯತೆ, ಪ್ರೇರಣೆಗಳನ್ನಾಧರಿಸಿ ತನ್ನದೇ ಆದ ಪಥವನ್ನು ನಿರ್ಮಿಸಿಕೊಂಡಿತು.

ಮಕ್ಕಳ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆ ನೀಡಿದವರಲ್ಲಿ ಪಂಜೆ ಮಂಗೇಶರಾಯರ 'ನಾಗರಹಾವೇ ಉದಯರಾಗ' ಕೃತಿಗಳು, ಹೊಯ್ಸಳರ 'ಬಂದ ಸಂತಮಣ್ಣ', 'ಸಕ್ಕರೆ ಗೊಂಬೆ', ಗದಿಗೆಯ್ಯ ಹೊನ್ನಾಪುರಮಠ ಅವರ 'ಅಲಿಬಾಬ ಮತ್ತು ೪೦ ಮಂದಿ ಕಳ್ಳರು', 'ಬಸವೇಶ್ವರ ಚರಿತ್ರೆ', ದಿನಕರ ದೇಸಾಯಿ ಅವರ 'ದಿನಕರ ಚೌಪದಿ', 'ಹೂ ಗೊಂಚಲು', ಮೇವುಂಡಿ ಮಲ್ಲಾರಿ ಅವರ 'ಪೆದ್ದನಪುರಿ', 'ಗುಬ್ಬಚ್ಚಿಗೂಡು' ಕುವೆಂಪು ಅವರ 'ನನ್ನ ಮನೆ', 'ಅಮಲನ ಕಥೆ', 'ಮನೆ ಮನೆ ಮುದ್ದುಮನೆ', ಡಾ. ಸಿದ್ದಯ್ಯ ಪುರಾಣಿಕರ 'ಗಿಲ್ ಗಿಲ್ ಗಿಲಗಚ್ಚಿ', 'ತುಪ್ಪಾ ರೊಟ್ಟಿಗೆ', ಕುವೆಂಪು ಅವರ ಇನ್ನೊಂದು ಕೃತಿ 'ಬೊಮ್ಮನಹಳ್ಳಿ ಕಿಂದರಜೋಗಿ', ಜಿ.ಪಿ. ರಾಜರತ್ನಂ ಬರೆದ 'ರತ್ನನ ಪದಗಳು' ಎಂಬ ದೇಶೀ ಸೊಗಡಿನ ಶಿಶು ಗೀತೆಗಳು ಹಾಗೂ ದ.ರಾ. ಬೇಂದ್ರೆಯವರು ಬರೆದ 'ಯಾರಿಗೂ ಹೇಳೋನು ಬ್ಯಾಡಾ', 'ಬನ್ನಿ ಬನ್ನಿ ಕನಸುಗಳೇ' ಮತ್ತು 'ಚಂದ್ರ' ಮುಂತಾದ ಉತ್ಕೃಷ್ಟ ಕವನಗಳು ಮೂಡಿಬಂದಿವೆ. ಆನಂದಕಂದರ 'ಮುದ್ದನ ಮಾತು' ರವೀಂದ್ರನಾಥ ಟ್ಯಾಗೋರರ 'ಕ್ರಿಸೆಂಟ್‌ಮೂನ್' ಇನ್ನೂ ಹಲವು ನಮ್ಮ ಕಣ್ಣ ಮುಂದಿವೆ. ಮಕ್ಕಳ ಪದ್ಯಗಳ ಸಾಮಾನ್ಯ ಲಕ್ಷಣಗಳನ್ನು ತಿಳಿಯುವ ಮುನ್ನ ಈ ಪದ್ಯ ಪ್ರಕಾರದ ವೈಶಿಷ್ಟ್ಯವನ್ನು ಒಮ್ಮೆ ನಾಜೂಕಾಗಿ ಪಿಂಗಡಿಸಿ ನೋಡಬಹುದಾಗಿದೆ. ಮಕ್ಕಳ ಪದ್ಯವೆಂದರೆ ಮಕ್ಕಳಿಗಾಗಿ ಹಿರಿಯರು ಬರೆದ ಪದ್ಯವೋ ಅಥವಾ ಮಕ್ಕಳೇ ಬರೆದ ಪದ್ಯವೋ? ಎರಡೂ ಹೌದು. ತೀಕ್ಷ್ಣಬುದ್ಧಿ, ಸೂಕ್ಷ್ಮದೃಷ್ಟಿ ಮತ್ತು ಕಲ್ಪನೆಯೊಂದಿಗೆ ತಾಳ ಅಥವಾ ಲಯದ ಪ್ರಜ್ಞೆಯೂ ಇರುವ ಮಕ್ಕಳು ತಮ್ಮ ಅನುಭವದ ಇತಿಮಿತಿಯಲ್ಲೇ ಪದ್ಯ ಬರೆಯುವುದೂ ಉಂಟು.

ಮಕ್ಕಳ ಸಾಹಿತ್ಯ ರಂಗಕ್ಕೆ ಮಹಿಳಾ ಕಾಣಿಕೆ ದೊಡ್ಡದು. ಮಕ್ಕಳ ಮನಸ್ಸನ್ನು ಅರಿತು ಅವರ ಸಾಮರ್ಥ್ಯ ಅಭಿರುಚಿಗೆ ತಕ್ಕಂತೆ ಬರೆಯುವ ಹಲವು ಮಂದಿ ಮಹಿಳಾ

ಸಾಹಿತಿಗಳಿದ್ದಾರೆ. ಮಕ್ಕಳ ಕೂಟದ ಕಲ್ಯಾಣಮ್ಮ ಎಂದೇ ಜನಮಾನಸದಲ್ಲಿರುವ ಕಲ್ಯಾಣಮ್ಮ ಅವರು ಸರಸ್ವತಿ ಎಂಬ ಪತ್ರಿಕೆಯನ್ನು ಹೊರಡಿಸಿ ಸುಮಾರು ನಾಲ್ಕು ದಶಕಗಳ ಕಾಲ ನಡೆಸಿದರು. ಮಕ್ಕಳ ಬಾವುಟ ಎಂಬ ಪ್ರತ್ಯೇಕ ವಿಭಾಗವನ್ನೇ ತೆರೆದರು. ನಿರುಪಮಾ ಅವರು ಬರೆದಿರುವ 'ಚಂದಕ್ಕಿ ಮಾಮ', 'ಮರ್ಯಾದೆ ರಾಮಣ್ಣ' ಕಥೆಗಳು ಡಾ. ಸರೋಜಿನಿ ಮಹಿಷಿ ಅವರ 'ಮುಳ್ಳು ಗುಲಾಬಿ' ಕವನ ಸಂಕಲನ ಜಿ.ಎಸ್. ರುಕ್ಕಮ್ಮ ಅವರ ಮೇರಿಕ್ಯೂರಿ ವೈಜ್ಞಾನಿಕ ಕೃತಿ. ಅನುಪಮಾ ನಿರಂಜನ ಅವರ 'ದಿನಕ್ಕೊಂದು ಕಥೆ', ಎನ್.ಎಸ್. ಸರಸ್ವತಿ ಅವರ 'ಭೂತಯ್ಯನ ಗುಡಿ', ವನಮಾಲಾ ಅವರ 'ಬುದ್ಧಿಬಲದ ಕಥೆಗಳು' ಭಾರತಿದೇವಿ ಅವರ 'ಬುದ್ಧಿವಂತರು', ಜಿ. ವಿಮಲಾ ಅವರ 'ತುಂಟರ ತೇರು', ಇಂದಿರಾ ಹಾಲಂಬಿ ಅವರ 'ಜೊತೆಯಲ್ಲಿ ಇರುವವರಾರು', ಎಸ್.ಕೆ. ರಮಾದೇವಮ್ಮಾ ಅವರ 'ರಷ್ಯನ್ ಮಕ್ಕಳ ಕಥೆಗಳು', ಶರ್ವಾಣಿ ಅವರ 'ಭೂತದ ಕಥೆಗಳು', ಜಿ. ಅನುರಾಧಾ ಅವರ 'ಮೈದಾನದ ಪ್ರಸಂಗ' ಮುಂತಾದ ರಚನೆಗಳು ಮಕ್ಕಳ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳಾಗಿವೆ.

ಉತ್ತರ ಕರ್ನಾಟಕ ಭಾಗದಲ್ಲಿ ಬರುವ ಜಿಲ್ಲೆಗಳೆಂದರೆ ಧಾರವಾಡ, ಗದಗ, ಕಾರವಾರ, ಬೆಳಗಾವಿ, ವಿಜಯಪೂರ, ಬೀದರ, ಕಲಬುರಗಿ, ರಾಯಚೂರು, ಬಳ್ಳಾರಿ, ಕೊಪ್ಪಳ, ಯಾದಗಿರಿ, ಹಾವೇರಿ, ಬಾಗಲಕೋಟ ಹೀಗೆ ಉತ್ತರ ಕರ್ನಾಟಕವು ಕೆಲವೊಂದಿಷ್ಟು ಅಭಿವೃದ್ಧಿ ಕಂಡರೂ ಸಹಿತ ಅಷ್ಟೊಂದು ಮುಂದುವರೆದ ಅಭಿವೃದ್ಧಿ ಹೊಂದದ ಬರಗಾಲದ ಬವಣೆ, ಕಳೆಯ ಬೀಡಾಗಿ ತನ್ನದೇ ಸ್ಥಾನ ಉಳಿಸಿಕೊಂಡ ವಿಜಯಪೂರ ಜಿಲ್ಲೆ ಇತಿಹಾಸ ಪ್ರಸಿದ್ಧವಾಗಿದೆ. ವಿಜಯಪೂರ ಜಿಲ್ಲೆ ಮೊದಲು ಇಲ್ಲಿ ಮುಸ್ಲೀಮರ ಆಡಳಿತ ಇತ್ತು. ಅದರಲ್ಲೂ ಆದಿಲ್‌ಶಾಹಿ ಕಾಲದಲ್ಲಿ ಅವರದೇ ಆದಂತಹ ರಾಜ್ಯಭಾರ ಇತ್ತು ಎನ್ನುವುದನ್ನು ನಾವು ಇತಿಹಾಸವನ್ನು ಓದಿದಾಗ ತಿಳಿದುಕೊಳ್ಳುತ್ತೇವೆ. ಅಷ್ಟೇ ಅಲ್ಲದೆ ಮುಂದೆ ಬರಬರುತ್ತಾ ವಿಜಯಪೂರ ಜಿಲ್ಲೆ ಆಧ್ಯಾತ್ಮಿಕವಾಗಿ ತನ್ನದೇ ಆದ ಛಾಪು ಮೂಡಿಸಿದೆ. ಇದು ಬಸವಣ್ಣ ಜನಿಸಿದ ನಾಡು, ಇಲ್ಲಿ ಬಂಥನಾಳ ಸಂಗನಬಸವ ಶಿವಯೋಗಿಗಳು, ಲಚ್ಯಾಣದ ಸಿದ್ಧಲಿಂಗ ಮಹಾಸ್ವಾಮಿಗಳು, ವೇದಾಂತ ಕೇಸರಿ ಮಲ್ಲಿಕಾರ್ಜುನಸ್ವಾಮಿಗಳು, ಫ.ಗು.ಹಳಕಟ್ಟಿಯವರು, ಸಿಂಪಿ ಲಿಂಗಣ್ಣನವರು, ಹಲಸಂಗಿ ಗೆಳೆಯರ ಗುಂಪು, ಮಧುರಚನ್ನರು, ಡಾ. ಗುರುಲಿಂಗ ಕಾಪಸೆಯವರು ಪೂಜ್ಯ ಶ್ರೀ ಸಿದ್ಧೇಶ್ವರ ಸ್ವಾಮಿಗಳು, ನಾಟಕ ರಚನೆಕಾರರಾದ ಕಂದಗಲ್ ಹಣಮಂತರಯರು, ಸ.ಸ. ಮಾಳವಾಡರು, ಹೀಗೆ ಮುಂತಾದವರನ್ನು ನೆನೆದುಕೊಂಡರೆ ಮೇರುಪರ್ವತವನ್ನೇ ಏರಿದ ಸಾಹಿತಿಗಳ ಗುಂಪು ನಮ್ಮ ಕಣ್ಣಮುಂದೆ ಬರುತ್ತದೆ. ಮುಂದೆ ಸಾಹಿತ್ಯದಲ್ಲಿ ಎರಡು ಗುಂಪುಗಳಾಗಿ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದ ಜಿಲ್ಲೆ ವಿಜಯಪೂರ ಜಿಲ್ಲೆ. ಮಕ್ಕಳಿಗಾಗಿ ಬರೆದ ಮಕ್ಕಳ ಸಾಹಿತ್ಯ ವಿಜಯಪೂರ ಜಿಲ್ಲೆಯವರು ಮುಂಚೂಣಿಯಲ್ಲಿದ್ದಾರೆ. ವಿಜಯಪೂರ ಜಿಲ್ಲೆ ಮಕ್ಕಳ ಸಾಹಿತ್ಯದ ತವರು ಎಂದು

ಹೇಳಿದರೆ ತಪ್ಪಾಗಲಾರದು. ಮಕ್ಕಳ ಸಾಹಿತಿಗಳು ಅದರಲ್ಲೂ ಶಿಕ್ಷಕರು ತನು-ಮನದಿಂದ ದುಡಿದು ಶಿಶುಸಾಹಿತ್ಯವನ್ನು ಬೆಳೆಸಿ ಪೋಷಿಸಿದರು. ಮಕ್ಕಳ ಸಾಹಿತ್ಯದ ಕಾಶಿ ಎನಿಸಿಕೊಂಡವರೇ ಸಿಸು ಸಂಗಮೇಶ ಅವರು. ಇಲ್ಲಿ ಅವರು ಮಕ್ಕಳ ಸಾಹಿತ್ಯದ ಛಾಪನ್ನೇ ಮೂಡಿಸಿದ್ದಾರೆ.

ಮಕ್ಕಳ ಸಾಹಿತ್ಯ ಸೃಷ್ಟಿ ನಾಜೂಕಿನದ್ದು. ಮಕ್ಕಳ ಆಂತರಿಕ ಮನಸ್ಸನ್ನು ಅರಿತು ಪರಕಾಯ ಪ್ರವೇಶ ಮಾಡಿ ಬರೆಯಬೇಕು. ಮಗುವಿನ ಮನಸ್ಸು ಚಂಚಲ, ಆ ಕಾರಣ ಅವರ ಒಲವಿಗಾಗಿ ಪುಸ್ತಕ, ಆಕಾರ, ಚಿತ್ರಶೈಲಿ, ಶಬ್ದಗಳ ಸರಳೀಕರಣದ ಬಗ್ಗೆ ಮಕ್ಕಳ ಸಾಹಿತಿಗಳು ಹೆಚ್ಚು ಒತ್ತು ಕೊಟ್ಟಿದ್ದಾರೆ. ಮಕ್ಕಳ ಸಾಹಿತ್ಯದ ಹರಿಕಾರರಾಗಿ ಕಾರ್ಯ ಮಾಡಿದವರು ವಿಜಯಪೂರ ಜಿಲ್ಲೆಯ ಮಕ್ಕಳ ಸಾಹಿತಿಗಳು. ಮಕ್ಕಳಿಗಾಗಿ ಹುಟ್ಟಿಕೊಂಡ ಸಾಹಿತ್ಯ ಅಪಾರವಾಗಿ ಬೆಳೆದಿದ್ದು ಉತ್ತರ ಕರ್ನಾಟಕದಲ್ಲಿ ಅದರಲ್ಲೂ ಮಕ್ಕಳ ಸಾಹಿತ್ಯಕ್ಕೆ ವಿಜಯಪೂರ ಜಿಲ್ಲೆಯ ಕೊಡುಗೆ ಉಲ್ಲೇಖನಾರ್ಹವಾದುದು.

ಹರ್ಡೇಕರ ಮಂಜಪ್ಪ, ಸಿಂಪಿ ಲಿಂಗಣ್ಣ, ಹ.ಮ. ಆಂಬಿಗೇರ, ಸಿಸು ಸಂಗಮೇಶ, ಈಶ್ವರ ಚಂದ್ರ ಚಿಂತಾಮಣಿ, ಶಂ.ಗು. ಬಿರಾದಾರ, ಶರಣಪ್ಪ ಕಂಚ್ಯಾಣಿ, ಸಂಗಮೇಶ ಬಾಗಲಕೋಟ, ಪರಶುರಾಮ ಚಿತ್ರಗಾರ, ಬಾ.ಇ. ಕುಮಠೆ, ಎ.ಕೆ. ರಾಮೇಶ್ವರ, ಹ.ಮ. ಪೂಜಾರ, ಫ.ಗು.ಸಿದ್ದಾಪೂರ, ಚಂದ್ರಗೌಡ ಕುಲಕರ್ಣಿ, ಜಂಬುನಾಥ ಕಂಚ್ಯಾಣಿ, ಪಂಡಿತರಾವ ಪಾಟೀಲ, ಸಿದ್ಧಲಿಂಗಪ್ಪ ಹದಿಮೂರ, ಕುಮಾರಿ ಮನಿಷಾ ಪಾಟೀಲ ಹೀಗೆ ಮೊದಲದವರು ಸಾಲು ಸಾಲಾಗಿ ಬೆಳೆದು ಬರುತ್ತಾರೆ. ಮಕ್ಕಳ ಭಾವಪರವಶತೆ, ಆದರ್ಶಪ್ರೀಯತೆ, ಕನಸುಗಾರಿಕೆ, ವಾತ್ಸಲ್ಯದ ಮನೋಭಾವ ಮೊದಲಾದವು ನವೋದಯ ಸಾಹಿತ್ಯದ ಸಾಧನೆಯ ಭಾಗಗಳಾಗಿ ಕಾಣುತ್ತವೆ. ಇದೇ ಮಾರ್ಗದಲ್ಲಿ ಮಕ್ಕಳ ಕವಿತೆಗಳು, ಕಥೆಗಳು, ಮಕ್ಕಳ ಸಾಹಿತ್ಯದಲ್ಲಿ ಬೆಳಕು ಕಂಡವು. ಅದರಲ್ಲೂ ಮಕ್ಕಳ ಸಾಹಿತ್ಯದ ಧ್ವಜವನ್ನು ದಿಲ್ಲಿಯಲ್ಲಿ ಹಾರಿಸಿದ ಕೀರ್ತಿ ಸಿಸು ಸಂಗಮೇಶ ಅವರಿಗೆ ಸಲ್ಲಬೇಕು. ಸಿ.ಸು ಸಂಗಮೇಶರ 'ನರಿಯ ಫಜೀತಿ', 'ಯಾರು ಜಾಣರು' ಕೃತಿಗಳು ರಾಷ್ಟ್ರೀಯ ಪ್ರಶಸ್ತಿ ಪಡೆದುಕೊಂಡಿವೆ.

ಪಂಜೆಯವರು ಮಕ್ಕಳ ಸಾಹಿತ್ಯದ ಮೊದಲಿಗರಾದರೆ ಸಿಸು ಸಂಗಮೇಶ ಅವರು ಮಕ್ಕಳ ಸಾಹಿತ್ಯದ ಪೂರ್ಣಪ್ರಮಾಣದ ಶಿಲ್ಪಿ ಎನಿಸಿಕೊಂಡಿದ್ದಾರೆ. ಮಕ್ಕಳ ಸಾಹಿತ್ಯದಲ್ಲಿ ತನ್ಮಯತೆಯಿಂದ ಹೊಸ ಹೊಸ ಪ್ರಯೋಗ ಮಾಡುತ್ತ ತಮ್ಮನ್ನು ತಾವು ಅರ್ಪಿಸಿಕೊಂಡ ಕಾರ್ಯವ್ಯಾಪ್ತಿ ವರ್ಣನಾತೀತವಾದದ್ದು. ವಿಜಯಪುರ ಜಿಲ್ಲೆಯ ಹಿರಿಯ ಮಕ್ಕಳ ಸಾಹಿತಿಗಳು ರಾಜ್ಯ, ರಾಷ್ಟ್ರಮಟ್ಟದಲ್ಲಿ ಹೆಸರು ಮಾಡಿದವರಾಗಿದ್ದಾರೆ. ತಮ್ಮ ಅಪ್ರತಿಮ ಪ್ರತಿಭೆಯಿಂದ ಮಕ್ಕಳ ಸಾಹಿತ್ಯಕ್ಕೆ ಹೆಗ್ಗಳಿಕೆ ತಂದವರಲ್ಲದೆ, ಮಕ್ಕಳ ಸಾಹಿತ್ಯಕ್ಕೆ ಉಜ್ವಲ ಭವಿಷ್ಯ ತಂದುಕೊಟ್ಟಿದ್ದಾರೆ. ವಿಜಯಪೂರ ಜಿಲ್ಲೆಯ ಕೊಡುಗೆ ಅಪಾರವಾದದ್ದು. ಅದರಲ್ಲೂ ಮಕ್ಕಳ ಸಾಹಿತ್ಯ ಪರಂಪರೆಯಲ್ಲಿ ಇಡೀ ಜಿಲ್ಲೆಯ ತುಂಬ ಮಕ್ಕಳ ಸಾಹಿತ್ಯದ

ಸುಗಂಧ ನಾಲ್ಕೂ ದಿಕ್ಕಿಗೂ ಹರಡುವ ಹಾಗೆ ಕಾವ್ಯಕೃಷಿ ಮಾಡಿದವರು ವಿಜಯಪೂರ ಜಿಲ್ಲೆಯವರು. ಮಕ್ಕಳಿಗಾಗಿಯೇ ಬರೆಯುವ ಹುರುಪು ಹುಮ್ಮಸ್ಸು ತುಂಬಿಕೊಂಡಿರುವ ಮೃದುಭಾಷೆಯ ಸರಳ ಸ್ವಭಾವದ ವ್ಯಕ್ತಿಗಳು ಮಕ್ಕಳ ಸಾಹಿತಿಗಳು.

ವಿಜಯಪೂರ ಜಿಲ್ಲೆಯಲ್ಲಿ ಶಿಕ್ಷಕ ಸಾಹಿತಿಗಳೇ ಹೆಚ್ಚಾಗಿ ಮಕ್ಕಳ ಸಾಹಿತ್ಯದ ವಾರಸುದಾರರು. ಸಾಕಷ್ಟು ಪುಸ್ತಕಗಳನ್ನು ಓದಿಕೊಂಡು ಶಿಕ್ಷಕರೇ ಮಕ್ಕಳ ಸಾಹಿತ್ಯವನ್ನು ಉತ್ತಮವಾಗಿ ರಚಿಸಬಲ್ಲರು ಎಂಬ ಮಾತು ಎಲ್ಲೆಡೆ ಕೇಳಿ ಬರುತ್ತದೆ. ಶಿಕ್ಷಕ ಸಾಹಿತಿಗಳೇ ಯಾಕೆ ಹೆಚ್ಚು ಮಕ್ಕಳ ಸಾಹಿತ್ಯ ರಚನೆ ಮಾಡಬಲ್ಲರು ಎಂಬುದಕ್ಕೆ ಕಾರಣ ಅವರ ಮಕ್ಕಳೊಂದಿಗಿನ ವಡನಾಟವೇ ಆಗಿದೆ. ಈ ಮಾತು ಬಹುಪಾಲು ಮಕ್ಕಳ ಸಾಹಿತಿಗಳಿಗೆ ಅನ್ವಯಿಸುತ್ತದೆ.

ಮಕ್ಕಳ ಸಾಹಿತ್ಯದ ಮೂಲ ನೆಲೆಯು ಜನಪದ ಸಾಹಿತ್ಯವೇ ಆಗಿದೆ. ಅಜ್ಜಿಕತೆ, ಶಿಶುಪ್ರಾಸಗಳು, ಗೀತೆಗಳು, ಸರಳ ಒಗಟುಗಳು ಮುಖ್ಯವೆನಿಸಿವೆ. ಪರಿಸರ, ಪ್ರಾಣಿ ಪಕ್ಷಿಗಳು ಹಾಗೂ ಮಹಾಪುರುಷರ ಸಾಧನೆಯನ್ನು ಅದ್ಭುತ ಶೈಲಿಯಲ್ಲಿ ಟಂಕಿಸಿದ ಪ್ರಕಾರ ಅದು ಶಿಷ್ಟ ಸಾಹಿತ್ಯದಲ್ಲಿ ಈ ಪ್ರಕಾರಗಳೇ ಹೆಚ್ಚಾಗಿರುವುದರೊಂದಿಗೆ ಅಲ್ಲಲ್ಲಿ ಕೆಲವು ದೃಶ್ಯರೂಪಕಗಳು, ಜೀವನ ಚಿತ್ರಗಳು, ಕತೆಯನ್ನೇ ಹೋಲುವ ಪ್ರಬಂಧಗಳು ಸೇರಿಕೊಂಡಿವೆ. ಪತ್ರ ಪುಸ್ತಕಗಳಿಗಾಗಿ ರಚಿಸಿದ ಗದ್ಯ ಪದ್ಯಗಳೂ ಸಹ ಮಕ್ಕಳ ಸಾಹಿತ್ಯ ವ್ಯಾಪ್ತಿಗೆ ಬರುತ್ತವೆ. ಭಾರತದಲ್ಲಿ ಪ್ರಾಚೀನ ಕಾಲದಿಂದಲೂ ರಾಮಾಯಣ, ಮಹಾಭಾರತ, ಪುರಾಣ, ಪಂಚತಂತ್ರ, ಹಿತೋಪದೇಶದ ಕಥೆಗಳು ದೇಶ, ಭಾಷೆಯ ಮೂಲಕ ಹರಿದು ಬಂದವು. ಮಕ್ಕಳ ಮನಸ್ಸನ್ನು ರಂಜಿಸುವುದರೊಂದಿಗೆ ನೀತಿ ಬೋಧಕಗಳಾಗಿಯೂ ಕಾರ್ಯ ನಿರ್ವಹಿಸಿವೆ. ಆದರೆ ಸಾಹಿತ್ಯ ಮತ್ತು ಸಂಸ್ಕೃತಿಯ ಮೂಲ ಬೇರುಗಳಿರುವುದು ಜಾನಪದದಲ್ಲಿ ಎಂಬುದನ್ನು ಮರೆಯುವಂತಿಲ್ಲ.

ಇಂದಿನ ದಿನಗಳಲ್ಲಿ ಮಕ್ಕಳಿಗೆ ಕನ್ನಡ ಪದ್ಯಗಳ ಬಗೆಗೆ ದಿವ್ಯ ನಿರ್ಲಕ್ಷ್ಯ. ಇಂಗ್ಲೀಷ ಕವಿತೆಗಳೇ ಪ್ರಿಯವಾದಂತೆ ತೋರುತ್ತವೆ. ಶಿಕ್ಷಣದಲ್ಲಿ ಇಂಗ್ಲೀಷ ಮಾಧ್ಯಮ ಪೋಷಕ ಒತ್ತಾಸೆಯಾಗಿದೆ. ಕನ್ನಡದಲ್ಲಿ ಮಕ್ಕಳಿಗಾಗಿ ಪದ್ಯಗಳನ್ನು ಬರೆಯುವವರ ಸಂಖ್ಯೆ ಕೊರತೆಯದೇನೋ ಅಲ್ಲ. ನವೋದಯದ ಹಿರಿಯರು ಶ್ರೀಕಾರ ಹಾಕಿದ ತೊರೆಯನ್ನು ಪರಂಪರೆ ಎನ್ನುವ ಹಾಗೆ ನಡೆಸಿಕೊಂಡೇ ಬಂದಿದ್ದಾರೆ ನಮ್ಮವರು. ಆದರೆ ಇತ್ತೀಚೆಗೆ ಈ ಪರಂಪರೆ ಸೊರಗಿದಂತೆ ಕಂಡುಬರುತ್ತದೆ. ಇದಕ್ಕೆಲ್ಲ ಹಲವು ಕಾರಣಗಳನ್ನು ಗುರುತಿಸಬಹುದು. ಅದೇನೇ ಇರಲಿ ದಂಡಿಯಾಗಿ ಬಿಟ್ಟುಬಿಡದೆ ಪುಸ್ತಕಗಳನ್ನು ಮುದ್ರಿಸುತ್ತ ಸಾಹಿತಿಗಳೆನಿಸಿಕೊಳ್ಳುವ ಹಂಬಲ ಸಖತ್ತಾಗಿಯೇ ಕಾಣುತ್ತಿರುವ ನಮ್ಮ ಸುತ್ತಲಿನ ಮಕ್ಕಳ ಸಾಹಿತ್ಯದ ವಾತಾವರಣದಲ್ಲಿ ಓಯಸ್ಸಿಸ್ಸಿನ ಹಾಗೆ ಅಲ್ಲಲ್ಲಿ ತಟಕ್ಕನೆ ಹಿಡಿದು ನಿಲ್ಲಿಸುವ ಹಲಕೆಲವು ಕೃತಿಗಳು ಕಂಡಾಗ ಆಗುವ ಸಂತಸ ಅಷ್ಟಿಷ್ಟಲ್ಲ. ಹಾಗೆ ಸಂತಸ ಉಂಟು

ಮಾಡಿದ್ದು ಸಂಗಮೇಶ ಗುಜಗೊಂಡರ ಕೃತಿಗಳು. ಮಕ್ಕಳ ಸಾಹಿತ್ಯದಲ್ಲಿ ಆಸಕ್ತಿ ಇರುವ ಅವರು ಕವಿತೆಗಳು, ಕಥೆಗಳು ಒಂದಿಷ್ಟು ಆಧ್ಯಾತ್ಮದಲ್ಲಿಯೂ ವಿಶೇಷ ಆಸಕ್ತಿಯುಳ್ಳವರು. ಅದರೊಟ್ಟಿಗೆ ಮಕ್ಕಳಿಗಾಗಿಯೂ ಬಲು ಹುರುಪಿನಿಂದ ಬರೆಯುತ್ತಿರುವ ಮಕ್ಕಳ ಸಾಹಿತಿಗಳಲ್ಲಿ ಅವರೂ ಒಬ್ಬರು.

ಮಕ್ಕಳ ಸಾಹಿತಿಗಳ ಪಟ್ಟಿ ಮಾಡುತ್ತ ಹೋದರೆ ಹೆಮ್ಮರವಾದಷ್ಟು ಮಕ್ಕಳ ಸಾಹಿತ್ಯ ಬೆಳೆದು ನಿಂತಿದೆ. ಇಂತಹವರ ಸಾಲಿನಲ್ಲಿ ಮಕ್ಕಳ ಸಾಹಿತಿಗಳಾದ ಸಂಗಮೇಶ ಗುಜಗೊಂಡ ಅವರೂ ಓರ್ವರಾಗಿದ್ದಾರೆ. ಸರಳ ಸಜ್ಜನಿಕೆಯ ಪ್ರಾಮಾಣಿಕತೆ, ಹೃದಯವಂತಿಕೆ, ವಾತ್ಸಲ್ಯ, ಮಮತೆ, ಸಹಕಾರ ಇವುಗಳಿಗೆ ಹೆಸರಾದ ಶ್ರೀಯುತ ಸಂಗಮೇಶ ಗುಜಗೊಂಡರ ಮಕ್ಕಳ ಕವಿತೆಗಳು, ಕಥೆಗಳು, ವಿಷಯ, ವಸ್ತು, ಭಾಷೆ, ಶೈಲಿ, ಲಯ, ಕಲ್ಪನೆ ಇವೆಲ್ಲವುಗಳಿಂದ ಗಮನ ಸೆಳೆಯುತ್ತವೆ. ಇವರ ಕವಿತೆಗಳಲ್ಲಿ ಸ್ಫಟಿಕ ಎದ್ದು ಕಾಣುವಂತೆ ಆಶಯಗಳು ಪ್ರಕಾಶಮಾನವಾಗಿ ಬಿಂಬಿತವಾಗಿವೆ.

ಸಂಗಮೇಶ ಗುಜಗೊಂಡರು ೮ನೇ ತರಗತಿಯಲ್ಲಿದ್ದಾಗ ಬರೆದ ಮಕ್ಕಳ ನೀಳ್ಗತೆ 'ಜಯಶಾಲಿ ಜಾಣ ಮಿತ್ರರು' ವಿಜಯಪೂರದ ಕರ್ನಾಟಕ ಸಂದೇಶ ವಾರಪತ್ರಿಕೆಯಲ್ಲಿ ಧಾರವಾಹಿಯಾಗಿ ಪ್ರಕಟವಾಯಿತು. ನಂತರ ಜೀವನಶಿಕ್ಷಣ, ಸುಧಾ, ಮಯೂರ, ಪ್ರಜಾವಾಣಿ, ತರಂಗ, ಸಂಯುಕ್ತ ಕರ್ನಾಟಕ, ತುಷಾರ, ವಿಜಯಕರ್ನಾಟಕ, ವಿಜಯವಾಣಿ, ಕನ್ನಡಪ್ರಭ, ಹೊಸತು, ಮಕ್ಕಳ ಮಂದಿರ, ಗುಬ್ಬಚ್ಚಿಗೂಡು ಮುಂತಾದ ಪತ್ರಿಕೆಗಳಲ್ಲಿ ಇದುವರೆಗೆ ಹಲವಾರು ಮಕ್ಕಳ ಕತೆ, ಕವಿತೆಗಳು ಪ್ರಕಟವಾಗಿವೆ. ಕೆಲವು ಕವಿತೆಗಳು ರಾಜ್ಯಮಟ್ಟದ ಸ್ಪರ್ಧೆಯಲ್ಲಿ ಬಹುಮಾನ ಪಡೆದಿವೆ. ಮಹಾರಾಷ್ಟ್ರ ರಾಜ್ಯದ ಕನ್ನಡ ೩ನೇ ಇಯತ್ತೆಯ 'ಬಾಲಭಾರತಿ' ಪಠ್ಯಪುಸ್ತಕಕ್ಕಾಗಿ 'ಹುಟ್ಟುಹಬ್ಬ' ಕವಿತೆ ಆಯ್ಕೆಯಾಗಿ ಪ್ರಕಟಗೊಂಡಿದೆ. ಮತ್ತೆ 'ಬಾಲಭಾರತಿ' ಪಠ್ಯಪುಸ್ತಕದಲ್ಲಿ 'ಹೋದ ಮಳೆ ಬಂತು' ಕಥೆ ಆಯ್ಕೆಗೊಂಡಿದೆ.

೧೯೯೪ ರಲ್ಲಿ ಗ್ರಾಮೀಣ ಸಾಂಸ್ಕೃತಿಕ ಪರಂಪರೆ ಮತ್ತು ರಾಷ್ಟ್ರೀಯ ಭಾವೈಕ್ಯ, ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗದ ಉಪನ್ಯಾಸ ಮಾಲೆಯಾಗಿ ಪ್ರಕಟವಾಗಿದೆ. ೧೯೯೫ ರಲ್ಲಿ 'ನೂರು ನಾಣ್ಯ ಮೂರು ಮಾತು' ಮಕ್ಕಳ ಕಥಾಸಂಕಲನ ಪ್ರಕಟವಾಗಿದೆ. ಕರ್ನಾಟಕ ರಾಜ್ಯದ ೬ನೇ ತರಗತಿಯ ಕನ್ನಡ ತೃತಿಯ ಭಾಷೆ ಪಠ್ಯಪುಸ್ತಕದಲ್ಲಿ ಪ್ರೀತಿಯೇ ದೇವರು ಕವಿತೆ ಪ್ರಕಟವಾಗಿದೆ. ಕರ್ನಾಟಕ ರಾಜ್ಯದ ೫ನೇ ತರಗತಿಯ ಪ್ರಥಮ ಭಾಷೆಯ ಸಿರಿಗನ್ನಡ ಮೊದಲ ಸೆಮಿಸ್ಟರ್ ಪುಸ್ತಕದಲ್ಲಿ 'ಇನಾಮು ಪತ್ರ' ಕಥೆ ಪ್ರಕಟವಾಗಿದೆ.

೨೦೦೮ ರಲ್ಲಿ ಕರ್ನಾಟಕ ಸಾಹಿತ್ಯ ಅಕಾಡಮಿ ಜರುಗಿಸಿದ ಮಕ್ಕಳ ಸಾಹಿತ್ಯ ಕಮ್ಮಟದ ನಿರ್ದೇಶಕರಾಗಿ ಕಾರ್ಯ ನಿರ್ವಹಿಸಿದ್ದಾರೆ. ಹಲವಾರು ಪ್ರಶಸ್ತಿ ಪುರಸ್ಕಾರಗಳನ್ನು ಪಡೆದಿದ್ದಾರೆ. ೧೯೮೯ ರಲ್ಲಿ ವಿಜಯಪೂರ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮದ ಸಂಸ್ಥಾಪಕ

ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೯೯ ರಲ್ಲಿ ಬೆಳಗಾವಿ ಜಿಲ್ಲಾ ಮಕ್ಕಳ ಸಾಹಿತ್ಯ ವೇದಿಕೆಯ ಉಪಾಧ್ಯಕ್ಷರಾಗಿ, ಭೂಮಂಡಲ ಪ್ರಕಾಶನದ ನಿರ್ದೇಶಕರಾಗಿ, ನ್ಯಾಷನಲ್ ಬುಕ್ ಟ್ರಸ್ಟಿನ (ದೆಹಲಿ) ಪುಸ್ತಕ ಕೂಟ ಸದಸ್ಯರಾಗಿ ಶರಣ ಚೇತನ ಮಾಸಪತ್ರಿಕೆಯ ಸಮಾಲೋಚನಾ ಮಂಡಳಿಯ ಸದಸ್ಯರಾಗಿ ೧೯೯೫ ರಲ್ಲಿ ಗೋಕಾಕ ತಾಲೂಕಾ ಕ.ಸಾ.ಪ. ಕಾರ್ಯದರ್ಶಿಯಾಗಿ, ೧೯೯೮ ರಲ್ಲಿ ಗೋಕಾಕ ತಾಲೂಕಾ ಕ.ಸಾ.ಪ. ಅಧ್ಯಕ್ಷರಾಗಿ, ಸಚೇತನ ಸಾಂಸ್ಕೃತಿಕ ವೇದಿಕೆ ಕೂಡಲಸಂಗಮ, ಗೌರವ ಸಲಹಾ ಮಂಡಳಿಯ ಸದಸ್ಯರಾಗಿ ಕರ್ನಾಟಕ ರಾಜ್ಯ ಶಿಕ್ಷಕರ ಪ್ರತಿಭಾ ಪರಿಷತ್ತು, ಗೌರವ ಸಲಹಾ ಮಂಡಳಿಯ ಸದಸ್ಯರಾಗಿ, ಸಾಹಿತ್ಯ ಸಂವಾದ ಬೆಳಗಾವಿ ಸದಸ್ಯರಾಗಿ ಹೀಗೆ ಹತ್ತು ಹಲವು ಸಂಘ ಸಂಸ್ಥೆಗಳ ಸದಸ್ಯರಾಗಿ ಕಾರ್ಯ ನಿರ್ವಹಿಸಿದ್ದಾರೆ.

ಸಂಗಮೇಶ ಗುಜಗೊಂಡರು ಹಲವಾರು ರಾಜ್ಯಮಟ್ಟದ, ರಾಷ್ಟ್ರಮಟ್ಟದ, ವಿಚಾರಗೋಷ್ಠಿ, ಕವಿಗೋಷ್ಠಿಗಳಲ್ಲಿ ಭಾಗವಹಿಸಿದ್ದಾರೆ. ಮಕ್ಕಳ ಸಾಹಿತ್ಯ ವೇದಿಕೆ ಮುಖಾಂತರ ಹಲವಾರು ಚರ್ಚಾಗೋಷ್ಠಿ, ಕವಿಗೋಷ್ಠಿ, ಸಮ್ಮೇಳನಗಳನ್ನು ಮಾಡಿದ್ದಾರೆ. ಮಕ್ಕಳ ಸಾಹಿತ್ಯ ವೇದಿಕೆಯ ಬೆಳವಣಿಗೆಗಾಗಿ ಶ್ರಮಿಸುತ್ತಲೇ ಇದ್ದಾರೆ. ಹಲವಾರು ಯುವ ಸಾಹಿತಿಗಳ ಕೃತಿಗಳಿಗೆ ಮುನ್ನುಡಿ, ಬೆನ್ನುಡಿಗಳನ್ನು ಬರೆದಿದ್ದಾರೆ.

ಇವರು ತಮ್ಮ ಬದುಕಿನಲ್ಲಿ ವೃತ್ತಿ ಹಾಗೂ ಪ್ರವೃತ್ತಿ ಎರಡರಲ್ಲಿಯೂ ಸಾಹಿತ್ಯ, ಸಮಾಜ, ಸಂಘಟನೆ, ಶಿಕ್ಷಣ ಹೀಗೆ ಪ್ರಾಮಾಣಿಕ ಸೇವೆ ಮಾಡುತ್ತ ಮುಂದೆ ಸಾಗಿದ್ದಾರೆ. ಅದರಲ್ಲಿ ವಿಶೇಷವಾಗಿ ಮಕ್ಕಳ ಸಾಹಿತ್ಯದಲ್ಲಿ ವಿಶೇಷ ಆಸಕ್ತಿ ವಹಿಸಿ, ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ವಿಶೇಷ ಕೊಡುಗೆ ನೀಡಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಹೆಚ್ಚು ಹೆಚ್ಚು ಅಧ್ಯಯನ ಮಾಡಿ ಮೌಲ್ಯಯುತ ಕೃತಿಗಳನ್ನು ರಚಿಸಿದ್ದಾರೆ. ಆ ಕೃತಿಗಳಿಗೆ ಮೌಲ್ಯಯುತ ಪ್ರಶಸ್ತಿಗಳನ್ನು ಪಡೆದುಕೊಂಡಿದ್ದಾರೆ. ಇವರು ಮಕ್ಕಳ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟವರು. ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯ ಒಂದು ಅಧ್ಯಯನವನ್ನು ಆರು ಅಧ್ಯಾಯಗಳಾಗಿ ವಿಂಗಡಿಸಿ ಅವರ ಸಾಹಿತ್ಯದ ಅಧ್ಯಯನವನ್ನು ಪೂರ್ಣಗೊಳಿಸಲಾಗಿದೆ. ಮಕ್ಕಳ ಬೆಳವಣಿಗೆಯೇ ರಾಷ್ಟ್ರದ ಬೆಳವಣಿಗೆ ಎಂಬ ಆಶಯವನ್ನು ಹೊತ್ತ ಇವರ ಕೃತಿಗಳು ಮಕ್ಕಳ ಆತ್ಮವಿಶ್ವಾಸ ಹೆಚ್ಚಿಸಲು ಸೂಕ್ತವಾಗಿವೆ. ಇವರ ಕೃತಿಗಳು ಹೆಚ್ಚಿನ ಅಧ್ಯಯನಕ್ಕೆ ಗಟ್ಟಿಯಾಗಿ ನಿಂತಿವೆ.

ಸಂಗಮೇಶ ಗುಜಗೊಂಡರು ಪ್ರಾಧ್ಯಾಪಕರಾಗಿದ್ದುಕೊಂಡು ಆಸಕ್ತಿ ಮೂಲಕ ಮಕ್ಕಳ ಸಾಹಿತ್ಯವನ್ನು ಅಮೂಲಾಗ್ರವಾಗಿ ಅರಿತವರು. ಸುಮಾರು ಇಪ್ಪತ್ತೆಂಟು ವರ್ಷಗಳಿಂದ ಕಾರ್ಯ ನಿರ್ವಹಿಸುತ್ತ ಮಕ್ಕಳ ಸಾಹಿತ್ಯದ ಅಭಿವೃದ್ಧಿಗಾಗಿ ಅಹೋರಾತ್ರಿ ಸೇವೆ ಮಾಡುತ್ತಿರುವುದು ನಿಜಕ್ಕೂ ಸಂತೋಷ. ಅವರ ಅನುಭವದ ಆಳವನ್ನು ಸಾಕಷ್ಟು

ವಿಸ್ತರಿಸಿಕೊಂಡು ಮಕ್ಕಳ ಸಾಹಿತ್ಯದ ರಚನೆ ಮಾಡುತ್ತ ಅವರೊಂದಿಗೆ ಮಕ್ಕಳ ಸಾಹಿತಿಗಳ ಪಡೆಯನ್ನೂ ನಿರ್ಮಿಸುತ್ತಿದ್ದಾರೆ.

ವಿಜಾಪೂರ ಜಿಲ್ಲೆಯ ಮಕ್ಕಳ ಸಾಹಿತ್ಯ ಪರಂಪರೆಯಲ್ಲಿ ಎಲೆಮರೆಯ ಕಾಯಿಯಂತೆ ಇರುವ ಸಂಗಮೇಶ ಮಲ್ಲಪ್ಪ ಗುಜಗೊಂಡ ಇವರು ವಿಜಾಪೂರ ಜಿಲ್ಲೆಯ ಬಸವನಬಾಗೇವಾಡಿ ತಾಲೂಕಿನ ಮನಗೂಳಿ ಎಂಬ ಪುಟ್ಟ ಗ್ರಾಮದಲ್ಲಿ ೧೯೬೪ ಅಗಸ್ಟ ೨ ರಂದು. ತಂದೆ ಮಲ್ಲಪ್ಪ, ತಾಯಿ ಮಹಾದೇವಿ. ಇವರ ಪವಿತ್ರ ಉದರದಿಂದ ಜನಿಸಿದರು. ಹಳ್ಳಿಯ ಪರಿಸರದಲ್ಲಿ ಬೆಳೆದು ಬಂದ ಇವರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸ್ವಂತ ಊರಿನಲ್ಲಿಯೇ ಮುಗಿಸಿಕೊಂಡು ೧೯೮೭ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಭೂಗೋಳಶಾಸ್ತ್ರ ವಿಷಯದಲ್ಲಿ ಚಿನ್ನದ ಪದಕದೊಂದಿಗೆ ಸ್ನಾತಕೋತ್ತರ ಪದವಿ ಮುಗಿಸಿದರು. ೧೯೮೭ ರ ಜುಲೈ ೨೩ರಿಂದ ಮೂಡಲಗಿಯ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಲು ಪ್ರಾರಂಭಿಸಿದರು. ಇವರು ಭೂಗೋಳಶಾಸ್ತ್ರದ ಅಧ್ಯಾಪಕರಾಗಿದ್ದುಕೊಂಡು ಅದರಲ್ಲೂ ಮಕ್ಕಳ ಸಾಹಿತ್ಯದಲ್ಲಿ ಆಸಕ್ತಿ ಬೆಳೆಸಿಕೊಮಡು ಅದರಲ್ಲಿಯೇ ಹಲವಾರು ಪ್ರಶಸ್ತಿ, ಸನ್ಮಾನಗಳಿಗೆ ಭಾಜನರಾಗಿ ಬದುಕನ್ನು ನಡೆಸುತ್ತಿರುವ ಅಪರೂಪದ ಮಕ್ಕಳ ಸಾಹಿತಿಗಳಲ್ಲಿ ಇವರೂ ಒಬ್ಬರು. ಮಕ್ಕಳ ಸಾಹಿತ್ಯ ರಚಿಸುವದು ಅಷ್ಟೇ ಅಲ್ಲ ಮಕ್ಕಳ ಸಾಹಿತ್ಯ ಸಮ್ಮೇಳನಗಳಲ್ಲಿ ತಮ್ಮನ್ನು ತಾವು ಸಕ್ರೀಯವಾಗಿ ತೊಡಗಿಸಿಕೊಂಡು ಹಲವಾರು ಗೋಷ್ಠಿಗಳ ಜವಾಬ್ದಾರಿ ನಿರ್ವಹಿಸಿದವರು. ಇವರು ಮೂಲತಃ ಗ್ರಾಮೀಣ ಪ್ರದೇಶದವರು. ಸುಮಾರು ೪೦-೫೦ ವರ್ಷಗಳ ಹಿಂದಿನ ಗ್ರಾಮೀಣ ಪ್ರದೇಶಗಳು ಹಳ್ಳಿಯ ಜೀವನ ಅಲ್ಲಿಯ ಜನಪದ ಬದುಕು, ಹಳ್ಳಿಯ ಆಟಗಳು ಇವರ ಮೇಲೆ ಹೆಚ್ಚು ಪ್ರಭಾವ ಬೀರಿದವು. ಈಗಿನಂತೆ ಆಗ ಮನರಂಜನೆಗೆ ಮಾಧ್ಯಮಗಳು ಗ್ರಾಮೀಣ ಪ್ರದೇಶದಲ್ಲಿ ಇರಲಿಲ್ಲ. ಇವರ ಬಾಲ್ಯದ ಶಿಕ್ಷಣದ ಜೊತೆಗೆ ಗ್ರಾಮೀಣ ಪ್ರದೇಶದ ಬದುಕು ಬರವಣಿಗೆಗೆ ಪ್ರೇರಣೆಯಾಯಿತು. ಮಕ್ಕಳ ಸಾಹಿತ್ಯಕ್ಕೆ ಬಾಲ್ಯಜೀವನದ ಅನುಭವ ಇರುವುದರಿಂದ ಮಕ್ಕಳ ಪದ್ಯರಚನೆ ಮಾಡಲು ಸಾಧ್ಯವಾಯಿತು. ಮೊದಲು 'ಜಯಶಾಲಿ ಜಾಣಮಿತ್ರರು' ಎನ್ನುವ ಕಥೆಯನ್ನು ಪ್ರಕಟಿಸಿದರು.

**ಸಮಾರೋಪ :**

ಮಕ್ಕಳ ಸಾಹಿತ್ಯದ ಬರವಣಿಗೆ ಹಾಗೂ ಅಧ್ಯಯನ ಅಷ್ಟು ಸುಲಭದ ಮಾತಲ್ಲ. ಕನ್ನಡ ಮಕ್ಕಳ ಸಾಹಿತ್ಯದಲ್ಲಿ ನೀತಿಬೋಧೆ ಹಾಗೂ ರಂಜನೀಯತೆಗೆ ಒತ್ತು ಸಿಕ್ಕಿದ್ದು ವೈಜ್ಞಾನಿಕತೆ, ಆಧುನಿಕ ಅಭಿವೃದ್ಧಿ ಕುರಿತು ಬರವಣಿಗೆಗಳು ಕಡಿಮೆ. ಮಕ್ಕಳ ಕುತೂಹಲವನ್ನು ತಣಿಸುವ ಸಾಹಿತ್ಯ ಬೆಳೆದುಬಂದಾಗಲೇ ಮಕ್ಕಳ ಸಾಹಿತ್ಯ ಪ್ರಕಾರದ ಮೌಲ್ಯ ಹೆಚ್ಚುತ್ತದೆ. ಮಕ್ಕಳಿಗಾಗಿಯೇ ಬರೆಯಲು ಹೊರಟರೂ ಎಷ್ಟೋ ವೇಳೆ ಚಿಂತನೆ ಹಾಗೂ ಅಭಿವ್ಯಕ್ತಿ ಆ ಉದ್ದೇಶವನ್ನು ಮೀರುತ್ತದೆ. ಮಕ್ಕಳ ಅಭಿರುಚಿ ಸಾಮರ್ಥ್ಯವನ್ನು

ಧರಿಸಿದ ಪುಸ್ತಕಗಳ ಸಂಖ್ಯೆ ಹೆಚ್ಚಿಲ್ಲ. ಮಕ್ಕಳಲ್ಲಿ ಭಾಷೆ, ಮಾನವೀಯ ಮೌಲ್ಯ, ಸಾಹಿತ್ಯ ಅಭಿರುಚಿಯನ್ನು ಬೆಳೆಸಲೆಂದೇ ಬರೆದ ಪುಸ್ತಕಗಳು ತೀರಾ ವಿರಳ. ಎಲ್ಲಾ ದೃಷ್ಟಿಯಿಂದ ಮಕ್ಕಳ ಸಾಹಿತ್ಯ ಅಧ್ಯಯನ ಮಾಡಿದಾಗ ಮಕ್ಕಳ ಸಾಹಿತಿಗಳಿಗೆ ಹೆಚ್ಚಿನ ಮನ್ನಣೆ ಸಿಗದಿರುವುದು ವಿಶಾದನೀಯ ಸಂಗತಿ.

ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯದ ಪ್ರಮುಖ ಘಟ್ಟ, ನಿಸರ್ಗ ಪ್ರೇಮ, ವಾತ್ಸಲ್ಯ, ಸಾಮಾಜಿಕ ಕಳಕಳಿ ಅವರ ಸಮಗ್ರ ಶಿಶುಸಾಹಿತ್ಯ ಕೃತಿಗಳು ಅಧ್ಯಯನಕ್ಕೆ ಅನುಗುಣವಾಗಲೆಂಬ ಆಶಯದಲ್ಲಿ ರೂಪಿಸಿ ಆ ನಿಟ್ಟಿನಲ್ಲಿ ಸಂಶೋಧನೆಗೆ ಅಳವಡಿಸಲಾಗಿದೆ.

* * * * *

# ಅಧ್ಯಾಯ : ಮೂರು

# ಸಂಗಮೇಶ ಗುಜಗೊಂಡರ ಪದ್ಯ ಸಾಹಿತ್ಯ

**ಪ್ರವೇಶ :**

ಮಕ್ಕಳ ಸಾಹಿತ್ಯವನ್ನು ಎತ್ತರಕ್ಕೆ ಬೆಳೆಸಿದ ಮಕ್ಕಳ ಸಾಹಿತ್ಯವನ್ನು ಪ್ರಸಾರ ಮಾಡಿದ ಕ್ರೀಯಾಶೀಲ ವ್ಯಕ್ತಿಗಳಾದ ಸಂಗಮೇಶ ಗುಜಗೊಂಡರು ಮಕ್ಕಳ ಸಾಹಿತ್ಯ ಪ್ರಕಾರಗಳಲ್ಲಿ ಕಥೆ, ಕವನಗಳಿಗೆ, ತುಂಬು ಪ್ರಾಶಸ್ತ್ಯ ನೀಡಿದ್ದಾರೆ. ಅಜ್ಜ ಅಜ್ಜಿಯರಿಂದ ಕಥೆ ಕೇಳಿ ಅನಂದಿಸುವ ಹಾಗೂ ಹಾಡು ಕೇಳಿ ಕುಣಿದಾಡುವ ಮಕ್ಕಳಿಗೆ ಈಗ ಆ ಪ್ರಸಂಗಗಳು ವಿರಳವಾಗಿವೆ. ಅಜ್ಜ-ಅಜ್ಜಿಯರೇ ಇಂದು ಟಿ.ವ್ಹಿಯ ಮುಂದೆ ಕುಳಿತು ಧಾರಾವಾಹಿಯನ್ನೋ, ಚಲನ ಚಿತ್ರವನ್ನೋ, ನೋಡುತ್ತಿರುವಾಗ ಅವರಿಗೆ ಕಥೆ, ಹಾಡುಗಳು, ಮರೆತು ಹೋಗಿವೆ. ಇದರಿಂದಾಗಿ ಮಕ್ಕಳ ಸಾಹಿತ್ಯಕ್ಕೆ ಪ್ರೋತ್ಸಾಹ ತೀರಾ ಕಡಿಮೆ. ಇಂತಹದರಲ್ಲಿಯೂ ಮಕ್ಕಳ ಸಾಹಿತಿಗಳು ಬೆರಳೆಣಿಕೆಯಷ್ಟು ಎಲೆ ಮರೆಯ ಕಾಯಿಯಂತೆ ತಮ್ಮ ಮಕ್ಕಳ ಸಾಹಿತ್ಯದ ಕೃಷಿಯಲ್ಲಿ ತೊಡಗಿದ್ದಾರೆ. ಮಕ್ಕಳ ಸಾಹಿತಿಗಳು ತಮ್ಮ ಕಥೆ ಕವನಗಳ ಮೂಲಕ ಮಕ್ಕಳಿಗೆ ಮನರಂಜನೆ, ಜ್ಞಾನವನ್ನು ನೀಡುತ್ತಿರುವುದುಂಟು. ಅಂಥವರಲ್ಲಿ ಸಂಗಮೇಶ ಗುಜಗೊಂಡರು ನಮ್ಮ ಮುಂದಿರುವ ಒಬ್ಬ ಅಪರೂಪದ ಮಕ್ಕಳ ಸಾಹಿತಿ.

**ಅಮ್ಮಾ ಕೇಳೆ:**

ಅವರ ಮೊದಲ ಕವನ ಸಮಕಲನ 'ಅಮ್ಮಾ ಕೇಳೆ' ಈ ಕವನ ಸಂಕಲನದಲ್ಲ ಒಟ್ಟು ಮೂವತ್ತೊಂದು ಕವನಗಳು ಒಳಗೊಂಡಿವೆ.

ಯಾವುದು ಗುರಿ?, ಇಷ್ಟ ಇಷ್ಟ, ಅಣ್ಣನ ತೋಟ, ಹುಟ್ಟು ಹಬ್ಬ, ಪುಟ್ಟನ ರಜೆ, ಪುಟ್ಟನ ಕುಚೇಷ್ಟೆ, ಪ್ರೀತಿಯೇ ದೇವರು, ಒಂದೇ ಒಳ್ಳಿಯ ಹೂಗಳು, ದುಡಿಮೆಯ ಸರದಾರ, ಅಜ್ಜನ ತೋಟ, ಕಂದನ ಚೆಲುವು, ಹಸಿರಿನ ಗೂಡನು ಕಟ್ಟುವೆವು, ಹರೆಯದ ಗುಟ್ಟು, ಜನ್ಮಭೂಮಿ, ಜಾಣಗುಬ್ಬಿ, ಹಸಿರುದ್ವೀಪ, ಅಜ್ಜನ ಗೊಣಗಾಟ, ಹದ್ದು ಹೇಳಿದ ಮಾತು, ಹಸಿರಿನ ಶಕ್ತಿಯ ಅರಿತಿಹೆನು, ಬಿಡುವಿನ ಬೆಡಗು, ನನ್ನ ಗಿರಿಧಾಮ, ನನ್ನ ಉಡುಗೊರೆ, ಗಿಡಮರ ಲೋಕ, ಚೈತ್ರದ ದಿನದಲ್ಲಿ, ಮಕ್ಕಳ ದಿನಾಚರಣೆ, ತೋಟದ ಊಟ, ಸಸಿಯ ನೆಡುವ ಕಾಲಬಂತು, ಪುಟ್ಟ ರೈತ, ಭೂಮಿಗೆ ಏನಾಯ್ತು ನೋಡೋಣ, ಅಮ್ಮಾ ಕೇಳೆ, ಕಿಟ್ಟು ಮತ್ತು ಗುಬ್ಬಿ ಹೀಗೆ ಒಟ್ಟು ೨೩ ಕವಿತೆಗಳಿವೆ.

ಸಂಗಮೇಶ ಗುಜಗೊಂಡರ ಕವನ ಸಂಕಲನದಲ್ಲಿ ಎದ್ದು ಕಾಣುವ ಕೆಲವು ಗುಣಗಳೆಂದರೆ ಪ್ರಕೃತಿ, ಪ್ರೀತಿ, ಪರಿಸರ ಪ್ರೀತಿ, ಜೀವನ ಪ್ರೀತಿ, ವೈಜ್ಞಾನಿಕ ದೃಷ್ಟಿಕೋನ ಮಕ್ಕಳಿಗೆ ಅಹ್ಲಾದವುಂಟು ಮಾಡುವ ಸಂಗತಿಗಳು ಈ ಕವನ ಸಂಕಲನಲ್ಲಿವೆ.

"ಅಮ್ಮಾ ಕೇಳೆ" ಕವನ ಸಂಕಲನ ಯಾವುದು ಗುರಿ? ಕವಿತೆಯೊಂದಿಗೆ ಪ್ರಾರಂಭವಾಗಿ "ಕಿಟ್ಟು ಮತ್ತು ಗುಬ್ಬಿ" ಕವಿತೆಯೊಂದಿಗೆ ಮುಕ್ತಾಯಗೊಳ್ಳುತ್ತದೆ.

ಇದು ಸಂಗಮೇಶ ಗುಜಗೊಂಡರ "ಅಮ್ಮಾ ಕೇಳೆ" ಕವನ ಸಂಕಲನದಲ್ಲಿ ಮೂವತ್ತೊಂದು ಕವನಗಳಿವೆ. ಎಲ್ಲಾ ಕವಿತೆಗಳು ಒಂದೇ ದಾಟಿಯಲ್ಲಿ ಸಾಗುವುದಿಲ್ಲ. ಇಲ್ಲಿಯ ಕವಿತೆಗಳಲ್ಲಿ ಕುತೂಹಲ ಕೆರಳಿಸುವ ಆಡಿ ಹಾಡಿ ಅಭಿನಯಿಸುವ ಸುಂದರ ಕನಸುಗಳನ್ನು ಕಾಣುವಂತಹ ಸಚಿತ್ರಿದೊಂದಿಗೆ ಕೂಡಿದ ಕವಿತೆಗಳಾಗಿವೆ. "ಅಮ್ಮಾ ಕೇಳೆ" ಈ ಸಂಕಲನ ಮಕ್ಕಳ ಬಳಗಕ್ಕೆ ಕೊಟ್ಟ ಮೊದಲ ಕಾಣಿಕೆ ಇವರದಾಗಿದೆ.

"ಹುಟ್ಟು ಹಬ್ಬ ಬಂದರೆ
ನಾನೇ ಬಾನ ಚಂದಿರ
ಬಂಧುಗಳ ಮಧ್ಯೆ
ಮಿನುಗುವಂಥ ಸಡಗರ
ಹೊಸ ಹೊಸ ಬಟ್ಟೆ ತೊಟ್ಟು
ಹಣೆಗೆ ತಿಲಕ ಪಡೆವೆನು
ಹಾರ ಧರಿಸಿ ರಾಜನಂತೆ
ಅಂದು ನಾನು ಮೆರೆವೆನು"[೨]

**ಕವಿತೆ ಹುಟ್ಟು ಹಬ್ಬ**

"ಸಂಗಮೇಶ ಗುಜಗೊಂಡರು ಒಬ್ಬ ಕ್ರಿಯಾಶೀಲ ಪ್ರಾದ್ಯಾಕರಾಗಿದ್ದಕೊಂಡು ಹಳ್ಳಿಯ ಮಕ್ಕಳ ಅಂದ ಚೆಂದವನ್ನು, ಅವರ ತೊದಲ ನುಡಿಗಳು, ಮನೆಯ ವಾತಾವರಣ ಮಕ್ಕಳ ಹುಟ್ಟು ಹಬ್ಬದ ಸಡಗರ ಸಿಹಿ ಹಂಚಿ ತಿನ್ನುವ ಪ್ರೀತಿ, ಹುಟ್ಟು ಹಬ್ಬ ಅಂದರೆ ಮಗುವಿಗೆ ಬಾನಿನ ಚಂದ್ರ ಫಳ ಫಳ ಹೊಳೆದಂತೆ ಅಷ್ಟೆ ಚೆಲುವು ನಗೆ, ಚಿಕ್ಕವರು, ದೊಡ್ಡವರು, ಸೇರಿ ಶುಭ ಕೋರುವ ಪ್ರೀತಿಯ ಮಾತುಗಳು ಬಾಲಕನ ಹಣೆಗೆ ತಿಲಕ ಇಟ್ಟು ಹಾರಹಾಕಿ ಶೃಂಗರಿಸಿದ ಪರಿ ಯಾವುದೋ ಅಂತಪೂರದ ರಾಜನಿರಬಹುದು ಎನೋ ಎನ್ನುವಷ್ಟು ಆತನಲ್ಲಿ ಖುಷಿ. ಈ ರೀತಿಯಾಗಿ ಗುಜಗೊಂಡರು ಮಕ್ಕಳ ಭಾವನೆಗಳು, ಅವರ ಆಸೆ ಕಲ್ಪನೆಗಳು ಕಾವ್ಯದ ಮೂಲಕ ತಿಳಿಸಿಕೊಟ್ಟಿದ್ದಾರೆ. ಸಾಲು ಸಾಲುಗಳಲ್ಲಿ ಭಾವ ತುಂಬಿ ನಿಂತ ಸಂದೇಶ ಇಲ್ಲಿನ ಕವಿತೆಗಳಲ್ಲಿದೆ. ಮಕ್ಕಳ ಕವಿತೆಗಳಲ್ಲಿ ಅದರ ಜೀವಾಳವಾಗಿರುವವುದು. ಅದು ಬಿಂಬಿಸುವ ತಾತ್ವಿಕತೆ, ಚಿಂತನೆ, ಮಕ್ಕಳ ಹೃದಯ ತಟ್ಟುವಲ್ಲಿ ಅದು ಗಟ್ಟಿಯಾಗಿದ್ದರೆ ತಾನಾಗಿಯೇ ಅದು ಉತ್ತಮಗೊಳ್ಳುತ್ತದೆ. ಮಕ್ಕಳ ಕವಿತೆ ಬರೆಯುವಾದರೆ ವಾಕ್ಯ, ಪ್ರಾಸ, ವ್ಯಾಕರಣಾಂಶಗಳು, ಮುಖ್ಯವಾಗಿ ಗಮನಿಸಬೇಕಾಗುತ್ತದೆ. ಒಬ್ಬ ಕವಿಯಲ್ಲಿ ಸೃಜನಶೀಲತೆ ಎನ್ನುವುದು ಇರಬೇಕಾಗುತ್ತದೆ. ಅದು ವಾಸ್ತವದಿಂದ ದೂರ ಹೋಗಬೇಕಾಗಿಲ್ಲ. ಮಕ್ಕಳ ಕವಿತೆಗಳಲ್ಲಿ ಹೆಚ್ಚಾಗಿ ಗ್ರಾಮೀಣ ಪ್ರದೇಶ, ಪರಿಸರ ಬಾಲ್ಯ,

---

[೨] ಸಂಗಮೇಶ ಗುಜಗೊಂಡ, ಅಮ್ಮಾ ಕೇಳೆ, ಪು. ೪.

ಪರಂಪರೆ, ಸಂಪ್ರದಾಯ, ಹೀಗೆ ಬೇರೆ ಬೇರೆ ವಿಷಯವನ್ನೊಳಗೊಂಡ ಕವಿತೆಗಳು ಸಚಿತ್ರಗಳನ್ನೊಳಗೊಂಡು ಮಕ್ಕಳಿಗೆ ಖುಷಿ ಕೊಡುತ್ತವೆ.

"ಸಂಗಮೇಶ ಗುಜಗೊಂಡರ ಕವಿತೆಗಳು ಸಿಸು ಸಂಗಮೇಶ ಹಾಗೂ ಕಂಚ್ಯಾಣಿ ಶರಣಪ್ಪನವರ ಕವಿತೆಗಳಂತೆ ಸರಾಗವಾಗಿ ಓದಿಸಿಕೊಂಡು ಹೋಗುತ್ತದೆ. ಸಿ.ಸು. ಸಂಗಮೇಶ ಒಂದು ಕವಿತೆ ಹೀಗಿದೆ.

"ಗುಡಿಗೋ ಮಸಿದಿಗೋ ಮಸಣಕೋ ಎಂದು
ಕೇಳುವದಿಲ್ಲಾ ಅರಳಿದ ಹೂವು
ಎಲ್ಲಿಗೆ ಒಯ್ಯಲಿ ತನ್ನಲಿರುವಾ
ವಾಸನೆ ಬಿಡದು ಬಂದರೂ ಸಾವು"[೩]

**ಕವಿತೆ – ಕನಸು–ಮನಸು:**

ಇದು ಸಿ.ಸು ಸಂಗಮೇಶ ಅವರ ಒಂದು ಪದ್ಯ, ಕವಿತೆಯನ್ನು ಓದುಗನು ಕಣ್ಣಿನಿಂದ ನೋಡುತ್ತಾನೆ. ನಂತರ ಅದರೊಳಗಡಗಿದ ಮಾತುಗಳನ್ನು ಕೇಳಿಸಿಕೊಳ್ಳುತ್ತಾನೆ. ಈ ಕೇಳಿಸಿಕೊಳ್ಳುವ ಕ್ರಿಯೆ ನಿರಂತರವಾಗಿ ನಡೆಯುತ್ತದೆ ಇಂತಹ ಸಿ.ಸು ಅವರ ಕವಿತೆಗಳು ಸಂಗಮೇಶ ಗುಜಗೊಂಡರಿಗೆ ಆದರ್ಶಪ್ರಾಯವಾಗಿದೆ. ಇಲ್ಲಿ ಹೂವನ್ನು ಯಾರೇ ತೆಗೆದುಕೊಂಡು ಹೋಗಲಿ, ಹೂ ಅದರ ಪರಿಮಳವನ್ನು ತೆಗೆದುಕೊಂಡೆ ಹೋಗುತ್ತದೆ. ಅದು ದೇವರಿಗೆ ಆಗಲಿ, ಮಸಣಕ್ಕೆ ಆಗಲಿ, ಹೂವು ಬಾಡಿ ಹೋಗುವವರೆಗೂ ಅದು ತನ್ನ ವಾಸನೆಯನ್ನು ಬಿಟ್ಟು ಕೊಡದು.

"ಕಂಚ್ಯಾಣಿ ಶರಣಪ್ಪನವರ ಒಂದು ಕವಿತೆಯನ್ನು ನೋಡಿದಾಗ ಅವರ ಕವಿತೆಗಳೂ ಒಳ್ಳೆಯ ಸಂದೇಶ ನೀಡುವುದರಲ್ಲಿ ಎರಡು ಮಾತಲ್ಲ.

"ನೀಲಿಯ ನಭದಲಿ
ಮುಸುಕಿದ ಮೋಡವು
ಹಂದರ ಹಾಕಿತ್ತು।
ಬಣ್ಣ ಬಣ್ಣದ
ಕಾಮನ ಬಿಲ್ಲಿನ
ತೋರಣ ಕಟ್ಟಿತ್ತು.
ತುಂತುರು ತುಂತುರು
ಮುತ್ತಿನ ಹನಿಗಳ
ಅಕ್ಷತೆ ಉದುರಿತ್ತು

---

[೩] ಸಿ.ಸು. ಸಂಗಮೇಶ, ಕನಸು–ಮನಸು, ಪು. ೩೮.

ಗೋಧುಳಿಯ ಶುಭ
ಗಳಿಗೆಯ ಮದುವೆಯು
ಯಾರದು ನಡೆದಿತ್ತು"।[೪]

**ಕವಿತೆ ಮದುವೆ**

ಈ ಕವಿತೆಯಲ್ಲಿ ಕಂಚ್ಯಾಣಿಯವರ ಭಾವನೆಗಳು ಸುಂದರವಾಗಿ ವ್ಯಕ್ತವಾಗಿವೆ. ಅವರ ಈ ಕವನದ ಸಾಲುಗಳಲ್ಲಿ ಸೃಷ್ಟಿಯ ಸಹಜ ಸುಂದರವಾದ ಸೊಬಗನ್ನೂ ಸೆರೆ ಹಿಡಿದಿದ್ದಾರೆ. ಕವಿಗೆ ನಿಸರ್ಗದ ವೈಚಿತ್ರ್ಯ, ಪ್ರಕೃತಿಯಲ್ಲಿ ಕಾಣುವ ಬದಲಾವಣೆ ಅದು ಅನುಭವಿ ಕವಿಗೆ ಮಾತ್ರ ಇಂತಹ ಸಾಲುಗಳನ್ನು ಬರೆದು ಮಕ್ಕಳಿಗೆ ಮುಟ್ಟಿಸುವಲ್ಲಿ ಕಂಚ್ಯಾಣಿಯವರ ಪಾತ್ರ ದೊಡ್ಡದು.

ಸಂಗಮೇಶ ಗುಜಗೊಂಡರ ಕವಿತೆಗಳೂ ಸಹ ಮಕ್ಕಳಿಗೆ ಉತ್ತಮ ಸಂದೇಶ ನೀಡುವಲ್ಲಿ ಮಹತ್ವವನ್ನು ಪಡೆದುಕೊಂಡಿವೆ.

"ಇಟ್ಟರೆ ಶೆಗಣಿಯಾದೆ ತಟ್ಟಿದರೆ ಕುರುಳಾದೆ
ಸುಟ್ಟರೆ ಬೂದಿಯಾದೆ ಹಚ್ಚಿದರೆ
ನೊಸಲಿಗೆ ವಿಭೂತಿಯಾದೆ"

ಎಂಬ ಗೋವಿನ ಹಾಡಿನಂತೆ ಹಾಗೂ ಶರಣರ ವಾಣಿಯೆಂತೆ ಇಲ್ಲಿ ಸಂಗಮೇಶ ಗುಜಗೊಂಡರ ಕವಿತೆಗಳೆಲ್ಲವೂ ತಾನು ತನ್ನದೆಲ್ಲವೂ ಪರಹಿತಕ್ಕಾಗಿ ಎಂಬ ಸಂದೇಶವನ್ನು ತಿಳಿಸುವುದರೊಂದಿಗೆ ಅಧ್ಯಾಪಕ ಜೀವನದೊಂದಿಗೆ ತಮ್ಮ ಬದುಕಿನ ಜೀವನವನ್ನು ಸೇರಿಸಿ ಸಾರ್ಥಕತೆಯ ಗುಟ್ಟನ್ನು ಕಂಡುಕೊಂಡ ಸಂಗಮೇಶರು ಆವರ ಮುಂದಿನ ಕವವಿತೆಗಳೆಲ್ಲವೂ ಆಕರ್ಷಿಸುವಲ್ಲಿ ಸಂದೇಹವಿಲ್ಲ.

"ಸಾಲು ಸಾಲು
ಹೊರು ಇರುವೆಯ
ಗುಂಪನು ಕಂಡನು ಪುಟ್ಟನು
ರೈಲು ಗಾಡಿಯ
ಹಾಗೆ ಓಡುವ
ಸಾಲು ನೋಡುತ ನಿಂತನು
ಮರಳಿ ಸಾಗಿದ ಇರುವೆ ಗುಂಪಿಗೆ
ಮತ್ತೆ ಕಿರುಕುಳ ಕೊಟ್ಟನು

[೪] ಕಂಚ್ಯಾಣಿ ಶರಣಪ್ಪ, ಮದುವೆ, ಪು.೨೦,

ನೋವು ತಾಳದೆ ಒಂದು ಇರುವೆಯು
ಕಚ್ಚಿ ಬಿಟ್ಟಿತು ಬೆರಳನು"[೫]

**ಕವಿತೆ ಪುಟ್ಟನ ಕುಚೇಷ್ಟೆ**

ಸರಳ ಪದಗಳ ಸಹಜ ಜೋಡಣೆಯಿಂದ ಈ ಕವಿತೆಯಲ್ಲಿ ಸಂದೇಶವನ್ನು ನೀಡಿದ್ದಾರೆ. ಪುಟ್ಟ ಪುಟ್ಟ ಇರುವೆಗಳ ಸಾಲು ನೋಡಿ ಪುಟ್ಟ ಸಂತೋಷ ಪಟ್ಟನು. ಮತ್ತೆ ಅವುಗಳ ಚಂದದ ಸಾಲುಗಳನ್ನು ಕೆಡಿಸಲು ತನ್ನ ಕೈಬೆರಳು ಅಡ್ಡ ತಂದು ಅವುಗಳಿಗೆ ಹಿಂಸೆ ಕೊಟ್ಟಾಗ ಅವು ಮರಳಿ ಕಚ್ಚದೆ ಬಿಡವು. ಇಲ್ಲಿ ನಾವು ಒಬ್ಬರಿಗೆ ಹಿಂಸೆ ಕೊಟ್ಟರೆ ಅವರೂ ಮರಳಿ ನಮಗೆ ಹಿಂಸೆ ಕೊಡಬಲ್ಲರು ಎಂಬ ಮಾತನ್ನೂ ಈ ಕವಿತೆಯಲ್ಲಿ ಸ್ಪಷ್ಟವಾಗಿದೆ. ಅಹಿಂಸೆಯ ಮಹತ್ವವನ್ನು ಈ ಕವಿತೆ ನವಿರಾಗಿ ಸಾರುತ್ತದೆ. ಮಕ್ಕಳಿಗೆ ನೀತಿಯನ್ನು ಹೀಗೆ ಅಪರೋಕ್ಷವಾಗಿ ಹೇಳಿದಾಗ ಅದು ಚಿಂತನಶೀಲತೆಯನ್ನು ಬೆಳಸುವುದಲ್ಲದೆ ಸೊಗಸಾಗಿ ಕಾಣುತ್ತದೆ.

"ಮತ್ತೆ ಬಂತು ಚೈತ್ರ" ೨೦೦೮ ರಲ್ಲಿ ಭೂಮಂಡಲ ಪ್ರಕಾಶನದಿಂದ ಪ್ರಕಟವಾಯಿತು. ಇದರಲ್ಲಿ ಒಟ್ಟು ೨೫ ಕವನಗಳಿವೆ. ಮಕ್ಕಳ ಸಾಹಿತ್ಯದಲ್ಲಿ ಎಲ್ಲ ಮಯೋಮಾನದ ಮಕ್ಕಳಿಗೆ ಒಂದೇ ರೀತಿಯ ಕವಿತೆಗಳನ್ನು ಹೇಳಲಿಕ್ಕಾಗದು, ಇಲ್ಲಿ ಗುಜಗೊಂಡರ ಕವಿತೆಗಳು ೧೦ ರಿಂದ ೧೪ ವಯೋಮಾನದ ಮಕ್ಕಳಿಗೆ ಯೋಗ್ಯವಾಗಿವೆ.

ಚೈತ್ರ ಬಂತು, ಪುಟ್ಟನ ರಜಾ ದಿನ, ಕಿಟ್ಟ ಸಸಿಯ ನೆಟ್ಟನು, ಅಣ್ಣನ ಸೈಕಲ್, ಗಗನವ ಸುತ್ತೋಣ, ಸಂಜೆಯ ಸೊಬಗು, ಮಂಗ ಮತ್ತು ಟ್ಟಿಟ್ಟಿಭ, ಎಳೆಯ ಕಣ್ಮಣಿ, ಬೇಸಿಗೆಯ ಮೋದ, ಚಿನ್ನದ ಹಬ್ಬದ ಗುರುತು, ತಾಯಿ ಭಾರತಿಗೆ ಆರತಿ, ಅಜ್ಜನ ಊರು, ಬೇಸಿಗೆ ರಜೆ ಸುರುವಾಯ್ತು, ಬೇಸಿಗೆ ಬರಲು, ಬೆಟ್ಟಕ್ಕೆ ಚಾರಣ, ಪ್ರೀತಿಯ ಶಾಲೆ, ನಾವು ಭಾರತೀಯರು, ಬಿಡುವಿನ ಬಿನ್ನಾಣ, ಮರ ಬೆಳೆಸೋಣ ಬನ್ನಿ, ಮಳೆಗಾಲದ ಮೋದ, ಚಾಚಾ ನೆಹರೂ, ಪ್ರೀತಿಲೆ ಮಳೆಯು ಸುರಿಯುವುದು, ಜಗದ ಹಬ್ಬ, ಹಮ್ಮಿಗೆ ಊರಿಗೆ ಹೆಮ್ಮೆಯ ಪುತ್ರ, ಮತ್ತೆ ಬಂತು ಚೈತ್ರ ಹೀಗೆ ಒಟ್ಟು ೨೫ ಕವನಗಳಿವೆ.

ಇಲ್ಲಿಯ ಕವಿತೆಗಳಲ್ಲಿ ಗೇಯತೆ ಇದೆ. ಪ್ರಾಸ ಬದ್ಧವಾದ, ಲಯಬದ್ಧವಾದ ಹಾಡಿ ಕುಣಿಯಲು ಯೋಗ್ಯವಾದ ಕವಿತೆಗಳಿವೆ. ಗುಜಗೊಂಡರ ಕವಿತೆಗಳಲ್ಲಿ ಒಂದು ಗತಿ ಇದೆ. ಹೀಗೆ ಇವರ ಕವನಗಳು ಮನಸೂರೆಗೊಳ್ಳುತ್ತವೆ. ಹಾಗೂ ಸಚಿತ್ರಗಳನ್ನು ಒಳಗೊಂಡಿವೆ. ಮುಖಪುಟದ ವಿನ್ಯಾಸ ಸುಂದರವಾಗಿ ಹೊರಹೊಮ್ಮಿದೆ. ಇಲ್ಲಿ 'ಚೈತ್ರ ಬಂತು" ಕವಿತೆಯೊಂದಿಗೆ ಪ್ರಾರಂಭವಾಗಿ 'ಮತ್ತೆ ಬಂದು ಚೈತ್ರ' ಕವಿತೆಯೊಂದಿಗೆ ಮುಕ್ತಾಯವಾಗುತ್ತದೆ. ಇದರಲ್ಲಿಯ ಪದ್ಯಗಳಲ್ಲಿ ಲಯ, ಪ್ರಾಸ, ಮಕ್ಕಳ ಭಾವನೆಗಳು ಅಭಿವ್ಯಕ್ತಗೊಂಡಿವೆ.

---

[೫] ಸಂಗಮೇಶ ಗುಜಗೊಂಡ, ಪುಟ್ಟನ ಕುಚೇಷ್ಟೆ, ಪು. ೬.

ಮಕ್ಕಳ ಸಾಹಿತ್ಯದಲ್ಲಿ ಮನಸ್ಸಿಗೆ ತಕ್ಕಂತೆ ಸರಳವಾದ, ಸುಲಭವಾದ, ಕವಿತೆಗಳನ್ನು ಆರಂಭಿಸಿ, ಒಂದಿಷ್ಟು ಬೆಳೆದ ಮಕ್ಕಳಿಗೆ ಓದಲು ಅರ್ಥವತ್ತಾದ ಕವಿತೆಗಳನ್ನು ಸಂಗಮೇಶ ಗುಜಗೊಂಡರು ಬರೆದಿದ್ದಾರೆ.

"ಅಲ್ಲಿ ಇಲ್ಲಿ ಕೂಹೂ ಕೂಹೂ
ದನಿಯು ಈಗ ಕೇಳಿದೆ
ಚೈತ್ರ ಬಂದ ಸುದ್ದಿ ಇದುವು
ಪಿಕವು ಸಾರಿ ಹೇಳಿದೆ"[೬]

**ಕವಿತೆ : ಚೈತ್ರ ಬಂತು.**

ಈ ಪದ್ಯದ ಸಾಲುಗಳಲ್ಲಿ ಕೋಗಿಲೆಯ ಧ್ವನಿಯು ಇಂಪಾಗಿದೆ. ಎಲ್ಲೋ ಒಂದು ಮರದ ಮೇಲೆ ಕುಳಿತು ಕೂಗುತಿದೆ. ಅದರ ಖುಷಿಗಾಗಿ, ಜನರ ಸಂತೋಷಕ್ಕಾಗಿ ಚೈತ್ರ ಮಾಸ ಬಂದಿದೆ. ಬನದ ತುಂಬ ಕಂಪು, ಇಂಪು ಎಲ್ಲೆಡೆ ತಂದಿದೆ ಎಂದು ಸಾರಿ ಸಾರಿ ಹೇಳುತ್ತದೆ.

"ರಟ್ಟೆಗೆ ರೆಕ್ಕೆಯ
ಸಿಕ್ಕಿಸಿಕೊಳ್ಳುವೆ
ಜೊತೆಯಿರು ಗಗನವ ಸೇರೋಣ"[೭]

**ಕವಿತೆ : ಗಗನ ಸುತ್ತೋಣ**

ರಟ್ಟೆಗೆ ರೆಕ್ಕೆ ಕಟ್ಟಿಕೊಂಡು ಹಕ್ಕಿಯೆಂತೆ ಆಕಾಶದಲ್ಲಿ ಹಾರಾಡುವ ಬಾರ, ಎಂಬ ಮಗುವಿನ ಬಯಕೆಯನ್ನು ಇಲ್ಲಿ ಕಾಣಬಹುದು. ತುಂತುರು ಮಳೆಯಲಿ ಸಂಜೆಯ ಚೇತನ ನೀಡುವುದು. ಸಂಜೆಯ ಸೊಬಗನ್ನೂ ಬಣ್ಣಿಸುತ್ತ ಹೇಳುವ ಈ ನುಡಿ ನಮಗೂ ಚೇತನ ನೀಡುತ್ತದೆ. ಮಕ್ಕಳ ಲೋಕವನ್ನು ಮಗುವಿನದಾದ ವಿಶೇಷದ ಕಣ್ಣಿನಿಂದ ಅನುಭವಿಸಬೇಕು. ಎಂದುಕೊಳ್ಳುವವರು ನಮ್ಮ ನಡುವೆ ಹಲವರಿರುತ್ತಾರೆ. ಅವರು ಬರೆಯ ತೊಡಗಿದರೆ ಮಕ್ಕಳ ಸಾಹಿತ್ಯವಾಗುತ್ತದೆ. ಅಂದುಕೊಳ್ಳುತ್ತೇನೆ. ಇಲ್ಲಿ ಸಂಗಮೇಶ ಗುಜಗೊಂಡರ ಪದ್ಯಗಳು ಅಕ್ಷರಗಳಲ್ಲಿ ಹಿಡಿದಿಡುತ್ತವೆ. ಮಕ್ಕಳ ಮನಸ್ಸಿನ ನಾನಾ ಬಗೆಯ ಭಾವದ ಸಂಗತಿಗಳನ್ನು ಅವರ ಕ್ಯಾಮರಾ ಕಣ್ಣಲ್ಲಿ ಹಿಡಿಯುವಲ್ಲಿ ಯಶಸ್ವಿಯಾಗಿದ್ದಾರೆ.

ಇವರ ಕವಿತೆಗಳಲ್ಲಿ ಲಯ ಇದೆ, ಪ್ರಾಸ ಬದ್ಧವಾಗಿರುವದರಿಂದ ಹಾಡಲು ಅನುಕೂಲವಾಗಿವೆ. ಮಕ್ಕಳು ಹಾಡಿ ಕುಣಿಯಲು ಯೋಗ್ಯವಾಗಿವೆ. ಇಲ್ಲಿನ ಕವಿತೆಗಳಲ್ಲಿ ಕೆಲವು ದೊಡ್ಡವು ಎನಿಸುತ್ತವೆ. ಮಕ್ಕಳಿಗೆ ಅವು ಚಿಕ್ಕದಾದಷ್ಟು ಒಳ್ಳೆಯದು, ಸಂಗಮೇಶ

---

[೬] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೧.
[೭] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೧೦.

ಗುಜಗೊಂಡರಿಗೆ ಮಕ್ಕಳ ಕವಿತೆಗಳನ್ನು ರಚಿಸುವುದರಲ್ಲಿ ಆಸಕ್ತಿ ಇದೆ. ಒಂದು ಲಯ, ಗತ್ತು, ಗಮ್ಮತ್ತು, ಗತಿ ಇದೆ, ಗೇಯತೆ ಇದೆ. ಹೀಗಾಗಿಯೇ ಅವರು ಉತ್ತಮ ಮಕ್ಕಳ ಕವಿತೆಗಳನ್ನು ರಚಿಸಬಲ್ಲರು. ಎಂಬ ವಿಶ್ವಾಸಾರ್ಹತೆಯನ್ನು ಉಳಿಸಿಕೊಂಡಿದ್ದಾರೆ.

"ಜನ್ಮತಾಯಿ ಭಾರತಿ ಬೆಳಗುತಿಹೆವು ಆರತಿ
ಜಗದಲಿ ನಿನಗಿಹುದು ಹಿರಿಯದಾದ ಕೀರುತಿ
ವಿವಿಧ ಭಾಷೆ ಜಾತಿ ಮತದ ಜನರು ಇರುವೆವು
ನಿನ್ನ ಪ್ರೀತಿ ಮಮತೆಯಲ್ಲಿ ಬದುಕುತಿರುವೆವು"[೮]

**ಕವಿತೆ: ತಾಯಿ ಭಾರತಿಗೆ ಆರತಿ**

ಈ ಪದ್ಯದ ಸಾಲುಗಳಲ್ಲಿ ಎಲ್ಲ ಮಕ್ಕಳು ಸೇರಿಕೊಂಡು ಭಾರತಾಂಬೆಗೆ ಆರತಿಯನ್ನೆತ್ತಿ ಬೆಳಗುತಿರುವುದು ನೋಡಿದರೆ ಇಲ್ಲಿ ಜಾತಿ ಮತ, ಪಂಥ ದೂರವಿಟ್ಟು ಎಲ್ಲರೂ ಒಂದೇ ಎಂಬ ಭಾವನೆಯನ್ನು ತೋರಿ ನಾವೆಲ್ಲರೂ ಜಾತಿ ಜನಾಂಗದಿಂದ ದೂರವಿದ್ದು, ಒಂದೇ ತಾಯ ಮಕ್ಕಳು ಎಂಬ ಮನೋಭಾವನೆಯನ್ನು ಹೊಂದಿ ಪ್ರೀತಿಯಿಂದ ನಿನ್ನ ಮಮತೆಯ ಮಡಿಲಲ್ಲಿ ಬದುಕುತ್ತಿದ್ದೇವೆ. ಎಂಬ ಆಶಾ ಭಾವನೆಯನ್ನು ಮಕ್ಕಳು ಇಲ್ಲಿ ವ್ಯಕ್ತಪಡಿಸಿದ್ದಾರೆ.

"ನವೋದಯ ಕಾಲದ ಮಕ್ಕಳ ಪದ್ಯಗಳು ರೂಪಪಡೆಯುವದರೊಂದಿಗೆ ಅಲ್ಲಿನ ಭಾವಗೀತೆಗಳ ಮಾದರಿಗಳನ್ನು ಅನುಕರಿಸಿದವು. ಮುಂದೆ ಅನೇಕರು ಇದನ್ನೇ ಮುಂದುವರೆಸಿಕೊಂಡು ಬಂದರು. ಸಂಗಮೇಶ ಗುಜಗೊಂಡರು ತಮ್ಮ ಕವಿತೆಗಳಲ್ಲಿ ವಸ್ತು ವೈವಿಧ್ಯಗಳಲ್ಲಿ ಅವರು ಸಾಕಷ್ಟು ಗಮನ ಸೆಳೆಯುತ್ತಾರೆ. ಮಕ್ಕಳ ಸಾಹಿತ್ಯದಲ್ಲಿ ಎಳೆಯರಿಗಾಗಿ ಶಿಶುಸಾಹಿತ್ಯ ಪ್ರಾಥಮಿಕ ತರಗತಿಯವರಿಗಾಗಿ, ಕಿಶೋರ ಸಾಹಿತ್ಯ, ಮಾದ್ಯಮಿಕ ಹಾಗೂ ಪ್ರೌಢ ತರಗತಿಯವರಿಗಾಗಿ, ಕೌಮಾರ ಸಾಹಿತ್ಯ ಎಂಬ ಮೂರು ವಿಧಗಳಿವೆ. ಎಂದು ಸಿ.ಸು. ಸಂಗಮೇಶರು ತಿಳಿಸಿದ್ದರು. ಬಹಳಷ್ಟು ಕೃತಿಗಳು ಮೊದಲ ಎರಡು ವಿಭಾಗಗಳಲ್ಲಿ ದೊರೆಯುತ್ತವೆ. ಮೂರನೆಯ ವಿಭಾಗದ ಮಕ್ಕಳ ಆಸಕ್ತಿ ಮತ್ತು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯ ಹೆಚ್ಚಿಗೆ ಇರುವುದರಿಂದ ಅವರಿಗೆ ಹೊಸ ಹೊಸ ವಿಷಯಗಳು, ಸಾಹಸಮಯ ಕಥೆಗಳು ಪತ್ತೆದಾರಿ ಸಾಹಿತ್ಯ, ಯುದ್ಧ, ಹೋರಾಟ, ಕುತೂಹಲ, ಕೆರಳಿಸುವ ಸೈನ್ಸ್ ಫಿಕ್ಷನ್, ಮೈನವಿರೇಳಿಸುವ ಥ್ರಿಲ್ಲಿಂಗ್ ಚಟುವಟಿಕೆಗಳಿಂದ ಕೂಡಿರುವ ಸಾಹಿತ್ಯ ಕೃತಿಗಳ ಅವಶ್ಯಕತೆ ಇಂದು ಹೆಚ್ಚಿದೆ. ಇಂದಿನ ಜಗತ್ತು ಹಿಂದಿನ ಜಗತ್ತಿನಂತಿಲ್ಲ. ಇಂದಿನ ಮಕ್ಕಳು ಹಿಂದಿನ ಮಕ್ಕಳಂತಿಲ್ಲ. ಮಕ್ಕಳಿಗೆ ಬೇಕಾಗಿರುವ ವಿದ್ಯೆಯ ಸ್ವರೂಪ ಇಂದಿನ ವೈಜ್ಞಾನಿಕ ನಾಗರಿಕ ಜೀವನಕ್ಕೆ ಹೊಂದಿಕೊಳ್ಳುವ ಪ್ರಕ್ರಿಯಗೆ ಅವಶ್ಯವಾಗಿರುವ ಲಕ್ಷಣದಿಂದ ಕೂಡಿರಬೇಕು.

---

[8] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೩.

ಹೀಗಾಗಿ ಇಂದಿನ ಮಕ್ಕಳಿಗೆ ಅದೇ ಹಳೆಯ ಕಥೆಗಳನ್ನು ಹೇಳಲು ಹೋದರೆ ರುಚಿಸದೇ ಇರಬಹುದು.

"ಇತ್ತೀಚೆಗೆ ಮಕ್ಕಳಿಗಾಗಿ ಮಾಹಿತಿ ,ಸಾಹಿತ್ಯ, ಸಾಹಸ ಸಾಹಿತ್ಯ ಎಂಬ ವಿಶಿಷ್ಟ ಪ್ರಕಾರಗಳ ಜೊತೆ ಚಟುವಟಿಕೆಗಳಿಂದ ಕೂಡಿದ ಮಕ್ಕಳ ಶೈಕ್ಷಣಿಕ ಹಾಗೂ ವಿಜ್ಞಾನ ಸಾಹಿತ್ಯ ಸಮೃಧ್ಧವಾಗಿ ಬೆಳೆದಿದೆ. ಮಕ್ಕಳ ಪತ್ರಿಕೆಗಳಲ್ಲಿ ಮತ್ತು ಪ್ರಕಾಶನಗಳಲ್ಲಿ ಮಕ್ಕಳಿಗಾಗಿಯೇ ಹೊಸ ಚಟುವಟಿಕೆ ಆಧರಿತ ಪುಟಾಣಿ ಪುಸ್ತಕಗಳ ರಾಶಿಯೇ ಬಿದಿದ್ದೆ. ಮಕ್ಕಳು ಇಷ್ಟ ಪಡುವ ಮಕ್ಕಳಿಗೆಂದೇ ಸರಳವಾಗಿ ರಚಿಸಲಾಗುವ ಬಣ್ಣ ಬಣ್ಣದ ಚಿತ್ರಗಳಿಂದ ಕೂಡಿದ ಹೊಸ ರೀತಿಯ ಕೃತಿಗಳು ಹೊರಬರಲಿ ಎಂಬ ಉದ್ದೇಶದಿಂದ ಸಂಗಮೇಶ ಗುಜಗೊಂಡರು ಮಕ್ಕಳಿಗೆ ಇಷ್ಟವಾಗುವಂತಹ ಚಿತ್ರ ಕಥೆಗಳು, ಚಿತ್ರ ಸಹಿತ ಪದ್ಯಗಳು, ರಚಿಸಿ ಮಕ್ಕಳು ಓದಿ ಸಂತಸ ಪಡುವ ಹಾಗೆ ಪ್ರಯತ್ನಿಸಿದ್ದಾರೆ.

ಮಕ್ಕಳ ಕವಿತೆಗಳಲ್ಲಿ ವಸ್ತು ಭಾಷೆ, ಶೈಲಿ ನಿರೂಪಣೆ, ಭಾವ ಲಕ್ಷಣಗಳು ಹೇಗಿರಬೇಕೆಂಬುದನ್ನು ಮಕ್ಕಳ ಕವಿತೆಗಳನ್ನು ಓದಿದಾಗಲೇ ಗೊತ್ತಾಗುತ್ತದೆ. ಉತ್ತಮವಾಗಿ ಪರಿಷ್ಕರಿಸಿದ ಪದ ವಿನ್ಯಾಸ ಹಾಗೂ ಪ್ರಾಸಗಳ ಜೋಡಣೆಯಿಂದ ಕೂಡಿರಬೇಕು.ಮಕ್ಕಳು ಓದಲಿಕ್ಕೆ ಬರುವಂತೆ ಸರಳವಾಗಿರಬೇಕು. ಸ್ಪಸ್ಟತೆ, ಸಹಜತೆಯಿಂದ ಕೂಡಿರಬೇಕು. ಪ್ರಾಸ ಸಹಜತೆಯೊಂದಿಗೆ ಸರಳತೆಯಿಂದ ಸಂಗಮೇಶ ಗುಜಗೊಂಡರ ಪದ್ಯಗಳು ಅವರ ಕೃತಿಗಳಲ್ಲಿ ಇವೆ. ಅವುಗಳಲ್ಲಿಯ ಒಂದು ಪದ್ಯ.

"ಅಜ್ಜನ ಊರಿಗೆ
ಬಿಡುವನು ಕಳೆಯಲು
ಪುಟ್ಟನು ಸರಬರ ಹೋಗುವನು
ಗಲ್ಲಿಯ ಎಲ್ಲಾ
ಗೆಳೆಯರ ಸೇರಿಸಿ
ಬಗೆಬಗೆ ಆಟವ ಆಡುವನು
ಗೆಳೆಯರ ಬಳಗದ
ಜತೆಯಲಿ ದಿನವಿಡಿ
ಅಲೆಯುತ ಅಲೆಯುತ ನಲಿಯುವನು
ಕೋಟೆ ಕೊತ್ತಲ
ಬನ ಬನ ಸುತ್ತುತ
ಮನದಣಿ ವಿಹಾರ ಮಾಡುವನು"[೯]

**ಕವಿತೆ : ಪುಟ್ಟನ ರಜಾದಿನ**

---

[೯] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೨೩.

ಇಲ್ಲಿ ಸಂಗಮೇಶ ಗುಜಗೊಂಡರು ಈ ಪದ್ಯದ ಸಾಲುಗಳಲ್ಲಿ ಮಗು ಬೇಸಿಗೆಯ ರಜೆಯಲಿ ಅಜ್ಜನ ಊರಿಗೆ ಹೋಗುವನು. ಗೆಳೆಯರ ಜೊತೆ ಮನದಣಿಯುವ ಹಾಗೆ ಬೇರೆ ಬೇರೆ ಆಟವನ್ನು ಆಡಿ ಕೋಟೆಯ ಗೋಡೆಗಳನ್ನು ಜಿಗಿಯುತ ಓಡುತ ಉದ್ಯಾವನದಲ್ಲಿ ಮರ ಏರಿ ಇಳಿದು, ದುಂಬಿ, ಪಾತರಗಿತ್ತಿ, ಹೀಗೆ ಬನದಲ್ಲಿ ಖುಷಿ ಖುಷಿಯಾಗಿ, ಓಡಾಡಿ ಗೆಳೆಯರೊಡನೆ ಸುತ್ತಾಡಿ ಮನೆಯ ಕಡೆಗೆ ಓಡಿ ಬರುವನು.

"ಕಂದನ ತೆರನೇ
ಬಂಧನ ಇಲ್ಲದೆ
ಬೇಸಿಗೆ ದಿನಗಳ ದೂಡುವನು
ಆಟದ ನೋಟದ
ಸವಿ ಸವಿ ನೆನಪನು
ನೆನೆಯುತ ಶಾಲೆಗೆ ಮರಳುವನು"[೧೦]

**ಕವಿತೆ : ಪುಟ್ಟನ ರಜಾದಿನ**

ಇಂತಹ ಪ್ರಾಸ, ಪದ್ಯಗಳು ಸಂಗಮೇಶ ಗುಜಗೊಂಡರ ಕೃತಿಗಳಲ್ಲಿ ಪ್ರಸಿದ್ದಿ ಪಡೆದಿವೆ. ಇಲ್ಲಿ ಕಾವ್ಯದ ಲಯ, ಪ್ರಾಸ, ಸಂಗಮೇಶ ಗುಜಗೊಂಡ ಅವರದು, ಇಂತಹ ಹಾಡುಗಳು ಮಕ್ಕಳ ಆಟಗಳಲ್ಲಿ ಮಕ್ಕಳಿಂದಲೇ ಸಹಜವಾಗಿತ್ತು. ಸರಳವಾಗಿ ಹುಟ್ಟಿಕೊಂಡವುಗಳು, ಮಕ್ಕಳಿಗೆ ಸಂತೋಷ ಕೊಡಬಲ್ಲ, ಅವರ ಮನಸ್ಸಿಗೆ ಮುದ ನೀಡಬಲ್ಲ ಮಕ್ಕಳ ಸಾಹಿತ್ಯ ಆಡು ಭಾಷೆಯಲ್ಲಿ ಮೂಡಿ ಬರಬೇಕು. ಇನ್ನುಳಿದ ಮಕ್ಕಳ ಕಾವ್ಯಕ್ಕಿಂತ ಸಂಗಮೇಶ ಗುಜಗೊಂಡರ ಮಕ್ಕಳ ಕವಿತೆಗಳು ಸ್ವಲ್ಪ ಭಿನ್ನವಾಗಿ ಕಾಣುತ್ತವೆ. ಗುಜಗೊಂಡರ ಕವಿತೆಗಳು ಮಕ್ಕಳ ಮನಸ್ಸಿನಲ್ಲಿರುವ ಚಿಂತನೆಯ ಕುತೂಹಲ ಕೆರಳಿಸುವ, ಸೃಜನಶೀಲತೆಯನ್ನು ಬೆಳೆಸುವ ಕ್ರಿಯಾಶೀಲಗೊಳಿಸುವ ಬೆಟ್ಟ ಗುಡ್ಡ, ಪಶು, ಪಕ್ಷಿ, ಪ್ರಾಣಿ, ಪ್ರಕೃತಿ, ಪರಿಸರ, ಹೀಗೆ ಎಲ್ಲಾ ವಿಷಯಗಳನ್ನು ಸುಂದರವಾಗಿ ಹೆಣೆಯುವ ಜಾಣ್ಮೆ ಹಾಗೂ ಮಕ್ಕಳ ಮನೋ ವಿಕಾಸವನ್ನು ಅರಗಿಸಿ ಕರಗತ ಮಾಡಿಕೊಳ್ಳುವ ಶಕ್ತಿ ಸಂಗಮೇಶ ಗುಜಗೊಂಡರಲ್ಲಿ ಇದೆ.

"ಪುಟ್ಟ ಸಸಿಯ ನೆಟ್ಟು ಕಿಟ್ಟ
ಹರುಷ ತಾನು ಪಟ್ಟನು
ಮೇಲೆ ಗೊಬ್ಬರವ ಹಾಕಿ
ಸುತ್ತ ಬೇಲಿ ಇಟ್ಟನು
ನಿತ್ಯ ನೀರು ಸಸಿಗೆ ನೀಡಿ

---

[೧೦] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೪.

ಅದಕೆ ಮುದವ ಕೊಟ್ಟನು
ಸೂರ್ಯ ತಾನು ಬೆಳಕು ಹರಿಸಿ
ಸಸಿಗೆ ನೆರವು ಆದನು..."[೧೧]

**ಕವಿತೆ : ಕಿಟ್ಟ ಸಸಿಯ ನೆಟ್ಟನು**

ಇಲ್ಲಿ ಕಿಟ್ಟ ಎಂಬ ಬಾಲಕ ಅಂಗಳದಿ ಒಂದು ಪುಟ್ಟ ಸಸಿಯನ್ನು ನೆಡುತ್ತಾನೆ. ಅದಕ್ಕೆ ದಿನವೂ ನೀರುಣಿಸುತ್ತಾನೆ ಅದನ್ನು ಯಾರೂ ಕಿತ್ತೆಸೆಯಬಾರದು ಎಂಬ ದೃಷ್ಟಿಯಿಂದ ಅದರ ಸುತ್ತಲೂ ಕಟ್ಟಿಗೆ ಹಾಗೂ ತಂತಿಯ ಬೇಲಿಯನ್ನು ಹಾಕುತ್ತಾನೆ. ಮೇಲೆ ಅದಕೆ ಗೊಬ್ಬರವನ್ನು ಹಾಕಿ ನಾನು ನೆಟ್ಟ ಸಸಿಯು ಬೆಳೆದು ಹೆಮ್ಮರವಾಗಲೆಂದು ಆಶಿಸುತ್ತ ಇದಕೆ ಗಾಳಿ, ಬೆಳಕು, ಸೂರ್ಯನೇ ನೀಡುತ್ತಾನೆ. ಈ ರೀತಿಯಾಗಿ ಮಕ್ಕಳು ಪರಿಸರದ ಬಗ್ಗೆ ಕಾಳಜಿ ವಹಿಸುವ ಕ್ರೀಯಾಶೀಲ ಮನೋಭಾವನೆಯನ್ನು ಒಳಗೊಂಡ ಕವಿತೆ ಇಲ್ಲಿ ಅನಾವರಣಗೊಂಡಿದೆ.

ಕಾವ್ಯವನ್ನು ಕವಿಯ ಮನಸ್ಸಿನಿಂದ ಬೇರ್ಪಡಿಸಲು ಸಾಧ್ಯವಿಲ್ಲ. ಗ್ರಾಮೀಣ ಪರಿಸರ, ಹಳ್ಳಿ, ಬೆಟ್ಟ, ಗಿಡಮರ, ಪಕ್ಷಿ, ಕಲರವ, ಹಿರಿಯರ ಸಂಬಂಧ ಜಾನಪದದ ಲಯಗಾರಿಕೆ ಮಕ್ಕಳ ಸ್ವಭಾವ ಅವರ ಬೇಕು ಬೇಡಿಕೆಗಳು, ಮನೆಯ ಪರಿಸರ, ಮಕ್ಕಳ ಕಾವ್ಯಕ್ಕೆ ಮೂಲ ಪ್ರೇರಣೆಯಾಗಿವೆ. ಮಕ್ಕಳಿಗಾಗಿ ಬರೆಯಬೇಕೆಂಬ ಉತ್ಸಾಹ ಶೀಲ ಸಾಹಿತಿಗಳು ಅನೇಕರಿದ್ದಾರೆ. ಅದೊಂದು ವಿಶೇಷ ಕಲೆ ಆರೋಗ್ಯಕರ ಬೆಳವಣಿಗೆಯನ್ನು ಕಾಣುವ ವಸ್ತುವಿನ ಆಯ್ಕೆ ಸರಳ ಭಾಷೆಯ ಸೊಬಗು, ಉತ್ತಮ ನಿರೂಪಣೆ, ಆಸಕ್ತಿದಾಯಕ ಬಣ್ಣನೆ ಮತ್ತು ಸಾಮರ್ಥದ ಹಿನ್ನೆಲೆಯಲ್ಲೇ ಆದರ್ಶ ಮೌಲ್ಯಗಳು ಹಿತವಾಗಿರಬೇಕು. ನಾಡು ನುಡಿಯ ಬಗೆಗಿನ ಪ್ರೇಮವನ್ನು ಬೆಳೆಸುವ ವಿವೇಕ ಸಾರ್ವಕಾಲಿಕವಾದುದು. ಮಕ್ಕಳ ಮನಸ್ಸಿಗೆ ನವಚೇತನವನ್ನು ಹೊರ ಹೊಮ್ಮಿಸಿ ಸ್ಮೃತಿ ಪಟಲದಲ್ಲಿ ಹೆಚ್ಚು ಕಾಲ ಉಳಿಯುತ್ತವೆ. ತ್ರಾಸವಿಲ್ಲದೆ ಓದಿಕೊಂಡು ಹೋಗುವ ಮತ್ತು ಅವರ ತುಟಿಗಳ ಮೇಲೆ ಆಗಾಗ ಲಾಸ್ಯವಾಡುವ ಪ್ರೀತಿಯ ಸಾಹಿತ್ಯ ಶಿಸು ಸಾಹಿತ್ಯ ಮಕ್ಕಳ ಸಾಹಿತ್ಯ, ಸರಳವಾಗಿರುತ್ತವೆ. ಅದೇ ಅದರ ಶ್ರೇಷ್ಠ ಗುಣ. ಆದರೆ ರಚನೆ ಅಷ್ಟೆ ಕಷ್ಟ ಮಕ್ಕಳ ಬೌದ್ದಿಕ, ಶೈಕ್ಷಣಿಕ, ಸಾಮಾಜಿಕ, ನೈತಿಕ, ಭಾಷಿಕ, ಕ್ಷಿತಿಜವನ್ನು ರಂಜನೀಯವಾಗಿ ವಿಸ್ತರಿಸಬಹುದಾದ ಕಾರ್ಯ ಅದು. ಮಕ್ಕಳ ಪರಿಸರಕ್ಕೆ ನಿಲುಕುವ ವಸ್ತು ವಿಶ್ಲೇಷಣೆಯಾಗಿದ್ದರೆ ಮಾತ್ರ ಯಶಸ್ವಿಯಗುತ್ತದೆ. ಉದಾ ನೋಡಿ:

"ಹಚ್ಚನೆ ಹಸುರನು ಹೊತ್ತಹ ಮರಗಳು
ಶಾಲೆಯ ಸುತ್ತಲು ಬೆಳದಿಹವು
ಬಗೆ ಬಗೆ ಬಣ್ಣದ ಹೂಗಳ ಬಿಟ್ಟಿಹ

[೧೧] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೫.

ಬಳ್ಳಿಯು ಕಮಾನು ಕಟ್ಟಿಹವು
ತಣ್ಣಗೆ ತೂರುವ ಗಾಳಿಯ ಜತೆಯಲಿ
ಹೂವಿನ ಪರಿಮಳ ತೇಲುವುದು
ಮನಸಿಗೆ ಮೂದವನು ನೀಡುವ ಪರಿಸರ
ಎಲ್ಲರ ಗಮನವ ಸೆಳೆಯುವುದು"[೧೨]

**ಕವಿತೆ : ಪ್ರೀತಿಯ ಶಾಲೆ**

ಈ ಕವಿತೆಯಲ್ಲಿ ಶಾಲೆಯ ತೋಟದ ಆಟ, ಅಲ್ಲಿರುವ ಚೆಲುವಿನ ಚಿಟ್ಟೆಗಳ, ದುಂಬಿಗಳ, ಝೇಂಕಾರ ಮಕ್ಕಳಿಗೆ ಮುದವನು ನೀಡುತ್ತವೆ. ಶಾಲೆಯ ಅಂಗಳದಿ ವಿವಿಧ ಆಟ ನೋಟಗಳ, ಚಿತ್ರಣವನ್ನು ಅಂದವಾಗಿ ಕವಿತೆಯಲ್ಲಿ ಮೂಡಿ ಬಂದಿದೆ. ಈ ಕವಿತೆ ಲಯದಲ್ಲಿ ಸಾಗಿ ಮಕ್ಕಳ ಮನದ ಭಾವನೆಯನ್ನು ವ್ಯಕ್ತವಾಗಿದೆ.

ಮಕ್ಕಳ ಸಾಹಿತ್ಯದ ಭಾಷೆ ಸರಳವಿದ್ದರೂ ಎಂಥಲ್ಲಿ ವಿಶಿಷ್ಠವಾಗಿರುತ್ತದೆ ಎನ್ನುವದೂ ಒಂದು ಪ್ರಮುಖ ಅಂಶ. ಪದಗಳ ಆಯ್ಕೆ, ಅವುಗಳ ಲಾಲಿತ್ಯ, ಪ್ರಾಸ, ಬದ್ದತೆ, ಚಿಕ್ಕದರಲ್ಲಿಯೂ ಚೊಕ್ಕದಾಗಿ ಆಕರ್ಷಕವಾಗಿ ಹಲುವು ಅರ್ಥಗಳ ವಿವಿಧ ರೂಪಗಳ ಶಬ್ದಗಳನ್ನು ಚಮತ್ಕಾರಿಕವಾಗಿ ಬಳಸಿರುವಲ್ಲಿ ಅಂಥ ವಿಶೇಷತೆ ಕಾಣಬಹುದು.

ಪರಿಸರ ಪ್ರೇಮಿಯಾದ ಸಂಗಮೇಶ ಗುಜಗೊಂಡರು ಪ್ರಕೃತಿಯ ಆಗು ಹೋಗುಗಳ ಪ್ರಾಣಿ–ಪಕ್ಷಿಗಳ ಬಗ್ಗೆ ಕಾಳಜಿ ಹೊಂದಿದವರು, ಅವರ ಭಾವಗೀತೆಗಳಲ್ಲಿ ಭಾರತಾಂಬೆಯ ಸ್ಮರಣೆ, ನಾಡಿನ ರಕ್ಷಣೆ ಒಂದೇ ಜಾತಿ ಒಂದೇ ಮತ, ಯುವ ಜನತೆಗೆ ಹೇಳಿಕೊಟ್ಟಿದ್ದಾರೆ. ಸಾಹಿತ್ಯದ ಆಶಯವು ಸತ್ಯದ ಅಂತರಂಗದ ಶೋಧನೆಯ ಮೂಲಕ ವ್ಯಕ್ತಿಯ ಆತ್ಮವಿಕಾಸವಾಗಿ ಆತನು ಬದುಕನ್ನು ಸಾರ್ಥಕ ಮಾಡಿಕೊಳ್ಳಬೇಕಾಗುತ್ತದೆ. ಕವಿಯ ಒಳ್ಳೆಯ ಸಂಸ್ಕಾರಗಳು ಅವನ ಅಭಿವ್ಯಕ್ತಿ ಸಮಾಜಕ್ಕೆ ಪೂರಕವಾಗುತ್ತವೆ. ಸಂಗಮೇಶ ಗುಜಗೊಂಡರ ಕಾವ್ಯಗಳಲ್ಲಿ ಸರಳ ಭಾಷೆ, ಕಾವ್ಯದ ವಸ್ತು ಸೃಜನತೆಯಿಂದ, ನೈಜತೆಯಿಂದ ಕೂಡಿರುವದರಿಂದ ಅವರ ಕವಿತೆಗಳು ಮಕ್ಕಳು ತಕ್ಷಣವೇ ಗ್ರಹಿಸುತ್ತಾರೆ.

"ಬಿರು ಬಿರು ಬಿಸಿಲಿನ ಬೇಸಿಗೆ ಕಳೆದಿದೆ.
ಈಗಲೇ ಬಂದಿದೆ ಮಳೆಗಾಲ
ಸುತ್ತಲು ಕವಿದಿದೆ ಕಪ್ಪನೆ ಮೋಡವು
ಸುರಿಸುತ ಧರೆಗೆ ಜೀವಜಲ
ಎಲ್ಲೆಡೆ ಹರಡಿದೆ ತಣ್ಣನೆ ಗಾಳಿಯು

---

[೧೨] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೩೪.

ಕಾಡಿದ ಧಗೆಯು ಮಟ್ಟ ಮಾಯ।
ಭೂಮಿಗೆ ಬಂದಿದೆ ಹೊಸ ಪ್ರಾಯ....”[೧೩]

**ಕವಿತೆ : ಮಳೆಗಾಲದ ಮೋದ**

“ಪರಿಸರದ ಬಗ್ಗೆ ಕಾಳಜಿ ಹೊಂದಿದ ಸಂಗಮೇಶ ಗುಜಗೊಂಡರು ಬಿಸಿಲು ಹೋಗಿ ಮಳೆ ಬಂತು. ಭೂಮಿ ತಂಪಾಯಿತು. ಹಸಿರು ಚಿಗುರಿತು ಎಂಬ ಈ ಸಾಲುಗಳು ಮಳೆ ಗಾಳಿ, ನೆಲ, ಜಲ, ಇವುಗಳ ಕುರಿತು ಮಕ್ಕಳ ಪರಿಸರದ ಬಗ್ಗೆ ಕಾಳಜಿ ಬೆಳಸಿಕೊಳ್ಳಲು ಗುಜಗೊಂಡರು ತಮ್ಮ ಕವಿತೆಗಳಲ್ಲಿ ಕರೆ ನೀಡಿದ್ದಾರೆ. ಮಕ್ಕಳ ಸಾಹಿತ್ಯ ಮಕ್ಕಳದ್ದೇ ಆದ ನೈಜ ಭಾಷೆಯಲ್ಲಿ ರಚಿತವಾಗಿದ್ದಾಗ ಮಾತ್ರ ಭಾಷಿಕ ಅಧ್ಯಯನಕ್ಕೆ ಯೋಗ್ಯವೆನಿಸುತ್ತದೆ. ಮಕ್ಕಳ ಮನಸ್ಸು, ಲಿಂಗ, ಶಿಕ್ಷಣ, ಪರಿಸರ, ಭಾಷಾ ಕೌಶಲ್ಯ ಮಾತೃ ಭಾಷೆ, ಪ್ರಾದೇಶಿಕತೆ, ಸಂಸ್ಕೃತಿ, ಇವುಗಳಿಗೆ ಸಂಬಂಧಪಟ್ಟಂತೆ ಭಾಷೆ ಅನೇಕ ವ್ಯತ್ಯಾಸಗಳನ್ನು ಒಳಗೊಂಡಿರುತ್ತದೆ. ಭಾಷೆ ವ್ಯವಹಾರಕ್ಕಾಗಿರುವ ಒಂದು ಸಮರ್ಥ ಸಂವಹನ ಮಾದ್ಯಮ, ಭಾಷೆ ಪರಿಸರದ ಕೂಸು, ಕಲಿಕೆಯಿಂದ ಬರುವಂತಹದು. ಮಕ್ಕಳ ಸಾಹಿತ್ಯ ಭಾಷಿಕ ಅಧ್ಯಯನ, ಮಕ್ಕಳ ಸಾಹಿತ್ಯದ ಭಾಷಿಕ ಅಧ್ಯಯನ ಎಂದರೆ ಮಕ್ಕಳೇ ರಚಿಸಿದ ಸಾಹಿತ್ಯ, ಇಲ್ಲವೆ ಮಕ್ಕಳಿಗಾಗಿ ದೊಡ್ಡವರು ರಚಿಸಿದ ಸಾಹಿತ್ಯ. ದೊಡ್ಡವರ ಭಾಷೆಗೂ ಮಕ್ಕಳ ಭಾಷೆಗೂ ಇರುವ ಮಹತ್ವದ ಅಂತರವೇ ಸರಳತೆ, ಇಲ್ಲಿ ಚಿಕ್ಕ ಶಬ್ದ ಚಿಕ್ಕ ಚಿಕ್ಕ ವಾಕ್ಯ, ಚಿಕ್ಕ ಚಿಕ್ಕ ಪದ ಪುಂಜಗಳನ್ನು ಕ್ಲಿಷ್ಟತೆಯಿಲ್ಲದಂತೆ, ಸಂಕೀರ್ಣವಾಗದಂತೆ ಸಹಜವಾಗಿ ಬಳಸವುವುದೇ ಸರಳ ಭಾಷೆಯ ಮುಖ್ಯ ಲಕ್ಷಣ. ಆಯಾ ಭಾಷೆಗಳ ಸರಳ ರಚನಾ ಚೌಕಟ್ಟನ್ನೇ ಮಕ್ಕಳ ಸಾಹಿತ್ಯದ ಭಾಷಿಕ ಅಧ್ಯಯನ, ಸಂಗಮೇಶ ಗುಜಗೊಂಡರು ತಮ್ಮ ಮಕ್ಕಳ ಸಾಹಿತ್ಯದ ಅಧ್ಯಯನದಲ್ಲಿ ತೋರಿಸಿಕೊಟ್ಟಿದ್ದಾರೆ.

“ಬಿಡುವಿನ ದಿನದಲಿ
ಗೆಳೆಯರ ಸಂಗಡ
ಊರಿನ ಸುತ್ತ ಸುತ್ತುವೆನು
ಹಳ್ಳ-ಕೊಳ್ಳ
ಬಳಸುತ ದಿನವಿಡಿ
ಹಕ್ಕಿಯ ಹಾಗೆಯೇ ಅಲೆಯುವೆನು”[೧೪]

**ಕವಿತೆ : ಬೆಟ್ಟಕ್ಕೆ ಚಾರಣ**

ಇಂತಹ ಕವಿತೆಗಳು ಮಕ್ಕಳು ತಮ್ಮದೇ ಆದ ಅನುಭವ, ಕಲ್ಪನೆ, ಶಬ್ದ ಸಂಪತ್ತು, ಮತ್ತು ವಿಚಾರಗಳಿಗೆ ಸ್ಪಂದಿಸಿ ಮಕ್ಕಳು ಓದಿ ಸಂತಸ ಪಡುವ ವಿಚಾರಗಳನ್ನು ಒಳಗೊಂಡ

---

[೧೩] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೪೨.
[೧೪] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೩೨.

ಸಾಹಿತ್ಯವನ್ನು ಮಕ್ಕಳ ಕವಿಗಳು ಆಸಕ್ತಿಯಿಂದ ರಚಿಸಬೇಕಾಗುತ್ತದೆ. ಇನ್ನೂ ಮಕ್ಕಳಿಗೆ ಸಾಹಿತ್ಯ ಹಿಡಿಸುವುದು. ಅವರದೇ ಆದ ಆಡು ನುಡಿಯಲ್ಲಿ ಅವರ ಸಾಹಿತ್ಯ ರಚನೆಗೊಂಡಗ ಮಕ್ಕಳು ತಾವು ಯಾವ ಪರಿಸರ ಸಂಸ್ಕೃತಿ, ಪ್ರಾದೇಶಿಕತೆಗಳನ್ನು ಹೊಂದಿರುತ್ತಾರೋ ಅಂಥ ಪರಿಸರದ ಸಂಸ್ಕೃತಿಯ ಪ್ರಾದೇಶಿಕ ಭಾಷೆಯಲ್ಲಿ ಮಕ್ಕಳ ಸಾಹಿತ್ಯ ರಚನೆಗೊಳ್ಳಬೇಕು.

ಇಲ್ಲಿ ಸಂಗಮೇಶ ಗುಜಗೊಂಡರು ಮಕ್ಕಳ ಸಾಹಿತ್ಯದಲ್ಲಿ ತಮ್ಮ ಅಶಯವನ್ನು ಸಾಧಿಸಿದ್ದಾರೆ. ಈಸಬೇಕು ಇದ್ದು ಜಯಿಸಬೇಕು ಎಂಬ ನಿರ್ಧಾರ ಸಾಕಾರಗೊಳಿಸಿದ್ದಾರೆ. ಗುಜಗೊಂಡರ ಎರಡೂ ಮಕ್ಕಳ ಕವಿತಾ ಸಂಕಲನಗಳು ಮಗುವಿನ ಬೆಳವಣಿಗೆಯ ದೃಷ್ಟಿಯಿಂದ ಮಾನವೀಯ ಮೌಲ್ಯಗಳು ನೈತಿಕತೆಯನ್ನು ಒಳಗೊಂಡಿವೆ.

ಸಂಗಮೇಶ ಗುಜಗೊಂಡರು ಬಾಲ್ಯದಲ್ಲಿ ಕೇಳಿದ ಕಥೆ, ಕವಿತೆ, ಲಾಲಿ ಹಾಡು, ಮಕ್ಕಳ ಆಟ, ಪರಿಸರದಿಂದ ಅಜ್ಜ ಅಜ್ಜಿಯರಿಂದ ನೆರೆ ಹೊರೆಯವರಿಂದ ಗೆಳೆಯರಿಂದ ಕೇಳಿದ ಕಥೆಗಳು ಹಾಡುಗಳು, ನೆನಪಿನಾಳದಲ್ಲಿ ಉಳಿಸಿಕೊಂಡು ಮಕ್ಕಳ ಸಾಹಿತ್ಯದ ಹೊಳೆಯನ್ನು ಹರಿಸಿ ಮಕ್ಕಳಿಗೆ ಹಾಲು ಜೇನನ್ನೇ ಉಣಬಡಿಸಿದ್ದಾರೆ. ಅವರ ಕಾವ್ಯದ ವಸ್ತು ಆಶಯ ಮಕ್ಕಳ ಮನ ಮುಟ್ಟುವಲ್ಲಿ ಯಶಸ್ವಿಯಾಗಿವೆ.

ಸಂಗಮೇಶ ಗುಜಗೊಂಡರ ಮೂರನೆ ಕವನ ಸಂಕಲನ 'ಹಕ್ಕಿ ಮತ್ತು ಮರಿಗಳು' ಈ ಸಂಕನದಲ್ಲಿ ಇಪ್ಪತ್ಮೂರು ಕವಿತೆಗಳಿವೆ.

ಜೇಡ ಮತ್ತು ಬಲೆ, ಹಕ್ಕಿ ಮತ್ತು ಮರಿಗಳು, ಮಳೆಯ ಸೊಗಸು, ಕಿಟ್ಟನ ಕನಸು, ಹೂವಿನ ತೋಟ, ನವಿಲು ನಾಟ್ಯಾವಾಡಿದೆ, ರಜೆಗಿದೆ ಬಹು ಬೆಲೆ, ಜೀವ ಭಾವ ತೂಗಿದೆ.

ಸಂಗಮೇಶ ಗುಜಗೊಂಡರ ಇಲ್ಲಿಯ ಕವಿತೆಗಳಲ್ಲಿ ಮಕ್ಕಳಿಗೆ ವೈಚಾರಿಕತೆಯನ್ನು ಬೆಳೆಸುವಂತಹ ಹಾಗೂ ಪ್ರಕೃತಿ ಬಗೆಗೆ ಬಾಂಧವ್ಯವನ್ನು ಬೆಳೆಸುವಂತಹ ಕವಿತೆಗಳು ಒಳಗೊಂಡಿವೆ. ಸಂಗಮೆಶ ಗುಜಗೊಂಡರ ರಚನೆಗಳಲ್ಲಿ ಮಕ್ಕಳಿಗೆ ಬೇಕಾಗುವ ಅವುಗಳದೇ ಲೋಕದ ಹಲವು ಬಗೆಯ ಸತ್ವ ಇದೆ ಗುಜಗೊಂಡರು ವಸ್ತು ವೈವಿಧ್ಯತೆಯಲ್ಲಿ ಸಾಕಷ್ಟು ಗಮನ ಸೆಳೆಯುತ್ತಾರೆ. ತೀರಾ ಗ್ರಾಮೀಣವಲ್ಲದ ಹಾಗೂ ತೀರಾ ಬೆಳೆದ ಶಹರವಲ್ಲದ ಪರಿಸರದಲ್ಲಿನ ಮಕ್ಕಳ ಸುತ್ತಲಿನ ಕಣ್ಣೋಟ ಮಕ್ಕಳ ಸಾಹಿತ್ಯದಲ್ಲಿ ಇದೆ.

ಪ್ರಾಣಿ ಪಕ್ಷಿಯ ಸೃಷ್ಟಿಯ ನಡುವೆಯ ಕಲ್ಪನಾ ಲಹರಿಯೂ ಇಲ್ಲಿ ಸುಂದರವಾಗಿ ವ್ಯಕ್ತವಾಗಿದೆ.

"ಮೂಲೆಯಲ್ಲಿ ಜೇಡವೊಂದು

ಬಲೆಯ ಹೆಣೆಯ ತೊಡಗಿತು

ಸಣ್ಣ ಸಣ್ಣ ಹೆಣೆಯ ತೊಡಗಿತು

ಸಣ್ಣ ಸಣ್ಣ ಎಳೆಯ ಎಳೆದು
ಅತ್ತ ಇತ್ತ ಸಾಗಿತು।"[೧೫]

**ಕವಿತೆ : ಜೇಡ ಮತ್ತು ಬಲೆ**

ಕವಿ ಸಂಗಮೇಶ ಗುಜಗೊಂಡರು ಇಲ್ಲಿ ಜೇಡವು ತನ್ನ ಬದುಕಿಗಾಗಿ ಆಶ್ರಯಕ್ಕಾಗಿ ಎಳೆ ಎಳೆಯಾಗಿ ಬಲೆಗಳನ್ನು ಹೆಣೆದುಕೊಂಡು ಬದುಕು ಕಟ್ಟಿಕೊಳ್ಳುವಲ್ಲಿ ಏಳು ಬೀಳುಗಳೊಂದಿಗೆ ಸಾಹಸ ಮಾಡಿರುವುದು ಮಕ್ಕಳಿಗೆ ಮನವರಿಕೆ ಮಾಡಿ ಕೊಡುವುದರೊಂದಿಗೆ ಸತತ ಶ್ರಮದಿಂದ ತನ್ನ ಗುರಿಯು ಸಾಧಿಸಿತು. ಇಂಥ ಗುಣಧರ್ಮವುಳ್ಳ ಚಿಕ್ಕ ಪ್ರಾಣಿಯ ಸಾಹಸ ಇಲ್ಲಿ ಸುಂದರವಾಗಿ ವ್ಯಕ್ತಗೊಂಡಿದೆ.

"ಮಕ್ಕಳ ಕವಿಗಳು ಪ್ರಾಸಕ್ಕೆ ಅಂಟಿಕೊಂಡು "ಆದಿ ಪ್ರಾಸ ಅಥವಾ ಅಂತ್ಯ ಪ್ರಾಸ, ಎಂದು ಮಾಡಿಕೊಂಡು ಹೀಗೆ ಪ್ರಾಸ ಕವಿತೆಗಳನ್ನು ಬರೆಯುವಲ್ಲಿ ತ್ರಾಸು ಪಟ್ಟುಕೊಳ್ಳುವುದು ಮಕ್ಕಳ ಕವಿಗಳ ರಚನಾ ಶೈಲಿಯಾಗಿತ್ತು. ಸಂಗಮೆಶ ಗುಜಗೊಂಡರು ಒಬ್ಬ ಭೂಗೋಳ ಶಾಸ್ತ್ರದ ಪ್ರಾಧ್ಯಾಪಕರಾಗಿ ಜೊತೆಗೆ ಕವನ, ಲೇಖನ, ಮಕ್ಕಳ ಸಾಹಿತ್ಯದ ಪುಸ್ತಕ, ಪ್ರಕಟಣೆ, ಸಂಘ ಸಂಸ್ಥೆಗಳಲ್ಲಿ ಮುಂತಾದ ಚಟುವಟಿಕೆಗಳನ್ನು ಬಿಡುವಿನ ವೇಳೆಯಲ್ಲಿ ಮಾಡುತ್ತ ಮಕ್ಕಳ ಸಾಹಿತ್ಯದ ದಿಗ್ಗಜರಲ್ಲಿ ಇವರೂ ಒಬ್ಬರು. ಎಂಬ ಕೀರ್ತಿ ಇವರಿಗೆ ಸಲ್ಲುತದೆ. ಮಕ್ಕಳಿಗಾಗಿ ಅವರ ಭಾವನೆಗಳಿಗೆ ಸ್ಪಂದಿಸುವಂತಹ ಸಾಹಿತ್ಯವನ್ನು ಸಂಗಮೇಶ ಗುಜಗೊಂಡರು ರಚಿಸಿದ್ದಾರೆ.

"ಗಗನದಲ್ಲಿ ತೇಲಿ ತೇಲಿ
ಹಕ್ಕಿ ದೂರ ಹಾರಿತು
ಅಲ್ಲಿ ಇಲ್ಲಿ ಎಲ್ಲ ಕಡೆಗೆ
ನೇರ ದೃಷ್ಟಿ ಹಾಕಿತು"[೧೬]

**ಕವಿತೆ : ಹಕ್ಕಿ ಮತ್ತು ಮರಿಗಳು**

ಈ ಕವಿತೆಯಲ್ಲಿ ಹಕ್ಕಿಗಳ ಬದುಕು ಅವುಗಳ ಜಾಣ್ಮೆ ಮರಿಗಳ ಮೇಲಿರುವ ತಾಯಿ ವಾತ್ಸಲ್ಯ, ಸುಂದರವಾದ ಪರಿಸರ ಬದುಕಿನ ಆಶ್ರಯಕ್ಕಾಗಿ ತಕ್ಕಗೂಡು ಗಾಳಿ ಮಳೆಗೆ ನಲುಗದಂತ ಪುಟ್ಟ ಮನೆ ದೂರ ಹಾರಿ ಕಾಳು ಕಡಿ ತಂದು ಮರಿಗಳಿಗೆ ಗುಟುಕು ಹಾಕಿ ಮಾತು ಕಲಿಸಿ ಪರಿಸರದಲ್ಲಿ ಸ್ವತಂತ್ರ್ಯವಾಗಿ ಹಾರಲು ಕಲಿಸಿ, ಬದುಕು ಕಲಿಸಿಕೊಟ್ಟ ತಾಯಿ ಹಕ್ಕಿಗೆ ಎಲ್ಲಿಲ್ಲದ ಸಂತೋಷ. ಸುಂದರವಾದ ಪರಿಸರ ಅಲ್ಲಿ ವಿವಿಧ ಹಕ್ಕಿಗಳ ಬದುಕು ಪ್ರೀತಿ, ತಾಯಿ ಹಕ್ಕಿ ಮರಿ ಹಕ್ಕಿಗಳ ಮಮತೆ ಅವುಗಳ ಕಿಲ ಕಿಲ ಮಾತು ಗೂಡುಗಳಿಂದ

---

[೧೫] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೧.
[೧೬] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೨.

ಹಾರಿ ಬಂದು ಒಂದೆಡೆ ಸೇರಿ ನಲಿಯುತ್ತವೆ. ಆನಂದಿಸುತ್ತವೆ. ಈ ಕವಿತೆಯಲ್ಲಿ ಹಕ್ಕಿಗಳೂ ಸುಂದರ ಬದುಕು ಕಟ್ಟಿಕೊಳ್ಳುತ್ತವೆ. ಸಂಗಮೇಶ ಗುಜಗೊಂಡರ ಪ್ರತಿಯೊಂದು ಕವಿತೆಗಳು ಸಚಿತ್ರಗಳೊಂದಿಗೆ ಆಕರ್ಷಕವಾಗಿ ಮೂಡಿ ಬಂದಿವೆ.

"ಮಳೆಯು ಬಂದು
ಹೊಸತು ಕಳೆಯು
ಮೂಡಿ ಭೂಮಿ ಮಿನುಗಿದೆ.
ಖಗ ಮೃಗ
ಜಂತು ಜನ
ಮಳೆಗೆ ಹರುಷ ಪಟ್ಟಿದೆ"[೧೭]

**ಕವಿತೆ : ಮಳೆಯ ಸೊಗಸು:**

ಸಂಗಮೇಶ ಗುಜಗೊಂಡರ ಕವಿತೆಗಳಲ್ಲಿ ಪುಟ್ಟ ಪುಟ್ಟ ಸಾಲುಗಳ ಶಬ್ದ ಸಂಗ್ರಹ ಮನಸ್ಸಿಗೆ ಹಿಡಿಸುತ್ತವೆ. ಅವರ ಬಹುತೇಕ ಕವಿತೆಗಳಲ್ಲಿ ಪರಿಸರದ ಕುರಿತೇ ಚಿತ್ರಿತವಾಗಿದೆ. ಪ್ರಾಥಮಿಕ ಶಾಲೆಯ ಮಕ್ಕಳು ಓದಿ ಖುಷಿ ಪಡುವಂತಹ ಶಿಶು ಸಾಹಿತ್ಯ ರಚನೆ ಸಂಗಮೇಶ ಗುಜಗೊಂಡರು ಕರಗತ ಮಾಡಿಕೊಂಡಿದ್ದಾರೆ. ಇಲ್ಲಿಯ ಪದ್ಯಗಳಲ್ಲಿ ಮಳೆಗಾಲದ ಚಿತ್ರಣ ಸೊಗಸಾಗಿದೆ. ಮಳೆಗಾಲದಲ್ಲಿ ಗುಡು ಗುಡು ಸದ್ದು ಸಿಡಿಲಿನ ಸದ್ದು, ರಪ ರಪ್ ಮಳೆಯ ಸದ್ದು, ಬರುಡಾದ ಭೂಮಿಗೆ ಹೊಸ ಕಳೆ ಬಂದು ಜೀವ ಜಂತುಗಳ ತೃಷೆಯನ್ನು ನೀಗಿಸಿ ಹರುಷ ಪಟ್ಟಿವೆ.

ಹಳ್ಳ ಕೊಳ್ಳಗಳು ಹರಿದು ಹಚ್ಚು ಹಸಿರಿನ ಪೈರನು ಬೆಳೆಯಲು ಹೊಸ ಕಳೆಯ ತಂದಿತು. ಮಳೆ ನೀರಿನಲ್ಲಿ ಮಕ್ಕಳು ಕುಣಿದಾಡಿ ಆಟವಾಡಿ, ಹರ್ಷಿತರಾಗುವ ಪರಿ, ಬಿಸಿಲಿನ ಬೇಗೆಯನು ಹೋಗಲಾಡಿಸಿದ ಮಳೆಗಾಲದ ದೃಶ್ಯವನ್ನು ಸಂಗಮೇಶ ಗುಜಗೊಂಡರು ನಿಸರ್ಗದ ಕುರಿತು ಮಳೆಗಾಲದ ವೈಭವನ್ನು ಅಭಿವ್ಯಕ್ತ ಪಡಿಸಿದ್ದಾರೆ.

"ಅನುದಿನ ಬೆವರಿನ ಕೋಡಿಯ ಹರಿಸುತ
ಅಣ್ಣನು ದುಡಿದೇ ದುಡಿಯುವನು
ಮಣ್ಣಿಗೆ ಗೊಬ್ಬರ ನೀರನು ಊಣಿಸುತ
ಹಣ್ಣಿನ ತೋಟವ ಬೆಳಸಿಹನು"[೧೮]

**ಕವಿತೆ : ಹೂವಿನ ತೋಟ**

---

[೧೭] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೩.
[೧೮] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೫.

ಪ್ರಸ್ತುತ ಕವಿತೆಯ ಸಾಲುಗಳಲ್ಲಿ ಸಂಗಮೇಶ ಗುಜಗೊಂಡರ ಆಶಯ ಮಕ್ಕಳು ದುಡಿಯುಬೇಕು. ಬೆವರಿನ ಮಹತ್ವ ತಿಳಿಯಬೇಕು. ಮರಗಿಡಗಳನ್ನು ಬೆಳೆಸುವ ಸಾಹಸಮಯ ಕೆಲಸಗಳು ಮಾಡಬೇಕು. ಮಕ್ಕಳಿಗೆ ಸ್ವಾವಲಂಬನೆಯ ಪಾಠ ಮನೆಯಿಂದಲೇ ಪ್ರಾರಂಭವಾಗಬೇಕು, ರೈತನ ಮಕ್ಕಳಿಗೆ ಮಣ್ಣು-ನೀರು, ಗೊಬ್ಬರ ಇವುಗಳ ಅರಿವು ಇರಬೇಕು. ಅನ್ನುವ ನಿಟ್ಟಿನಲ್ಲಿ ಮಕ್ಕಳು ತೋಟದಲ್ಲಾಗಲಿ ಅಥವಾ ಮನೆಯಂಗಳದಲ್ಲಾಗಲಿ ಹೂವಿನ, ಹಣ್ಣಿನ ಸಸಿಗಳನ್ನು ನೆಟ್ಟು ಅವುಗಳ ಪಾಲನೆ, ಪೋಷಣೆ ಮಾಡಿ ಅವುಗಳನ್ನು ಎತ್ತರವಾಗಿ ಬೆಳೆಸಿ ಬೆಳೆಸಿದ ಆ ಮರಗಳು ಹಣ್ಣುಗಳು ಕೊಟ್ಟಾಗ ಇದು ಬೆವರಿನ ಪ್ರತಿಫಲವೇ ಹೊರತು ನಮಗೆ ಸಿಹಿಯಾದ ಹಣ್ಣುಗಳು ಸಿಗಬೇಕಾದರೆ ಅದರ ಹಿಂದೆ ಶ್ರಮ ಇದೆ ಎನ್ನುವ ನಂಬಿಕೆಯನ್ನು ಮಕ್ಕಳಲ್ಲೂ ಹುಟ್ಟಿಸಬೇಕು. ನೀರು ಗೊಬ್ಬರದಿಂದ ಸಸಿಯೊಂದು ಮರವಾಗಿ ಸಿಹಿ ಹಣ್ಣುಗಳು ನೀಡುವುದು ಅದರ ಕಾಯಕ ಮಕ್ಕಳಿಗೆ ಮರಗಳು ಬೆಳೆಸುವುದರ ಜೊತೆಗೆ ಪರಿಸರದ ಕಾಳಜಿ ಮೂಡಿಸುವದು ಮಹತ್ತರ ಅಂಶವಾಗಿದೆ.

"ಹೊರಗಡೆ ಬಂದಂತೆ
ನಮಗಿಹುದು ಸೂಟಿಯ ದಕ್ಕಿಹುದು
ಬನ ಬನ ಅಲೆಯಲು
ಊರೂರು ಸುತ್ತಲು
ಈಗಲೇ ಸಮಯವು ಸಿಕ್ಕಿಹುದು"[೧೯]

**ಕವಿತೆ : ರಜೆಗಿದೆ ಬಹುಬೆಲೆ**

ಸಂಗಮೇಶ ಗುಜಗೊಂಡ ಕವಿತೆಗಳಲ್ಲಿ ಬೇಸಿಗೆ ರಜೆಯ ಕುರಿತೆ ಹಲವು ಪದ್ಯಗಳಲ್ಲಿ ಹಲವು ಭಾವನೆಗಳು ವ್ಯಕ್ತವಾಗಿವೆ. ಮಕ್ಕಳ ಸಾಹಿತ್ಯದ ಬೆಳೆಯನ್ನು ಹುಲುಸಾಗಿ ಬೆಳೆಯಲು ಸಂಗಮೇಶ ಗುಜಗೊಂಡರು ಮಕ್ಕಳಿಗಾಗಿ ಒಳ್ಳೆಯ ಪದ ಪ್ರಯೋಗಗಳನ್ನು ಬಳಸಿ ಅವರ ಮನೋ ವಿಕಾಸಕ್ಕೆ ಅನುಗುಣವಾಗುವಂತಹ ಕವಿತೆಗಳು ರಚಿಸಿರುವುದು. ಸ್ತುತ್ಯಾರ್ಹವಾಗಿದೆ. ಈ ಕವಿತೆಗಳಲ್ಲಿ ಬೇಸಿಗೆ ರಜೆಯಲ್ಲಿ ಮಕ್ಕಳಿಗೆ ಎಲ್ಲಿಲ್ಲದ ಆನಂದ. ಅವರಿಗೆ ಓದು ಬರಹದಿಂದ ಮುಕ್ತಿ ಸಿಕ್ಕಂತೆ. ಮಜಾ ಮಾಡಲು ಅಜ್ಜ-ಅಜ್ಜಿಯ ಊರಿಗೆ ಹೋಗುವುದೆಂದರೆ ಬಲು ಖುಷಿ. ತೋಟದ ಗಿಡಗಳಲ್ಲಿ ಜಿಗಿದಾಡುವುದು ಕೆರೆ ಭಾವಿಗಳಲ್ಲಿ ಈಜಾಡುವುದು ಊರಿನ ಗುಡಿ ಗುಂಡಾರಗಳು ಸುತ್ತುವುದು. ಬೇಸಿಗೆ ಸಮಯ ಮಕ್ಕಳಿಗೆ ಉಲ್ಲಾಸ ನೀಡುವ ಸಮಯ, ಅಜ್ಜ ಅಜ್ಜಿ ಊರಿಗೆ ಕಳಿಸುವುದೆಂದರೆ ಅವರನ್ನು ಪಂಜರದಿಂದ ಬಿಡುಗಡೆ ಮಾಡಿದಂತೆ, ಹಕ್ಕಿಯಂತೆ ಹಾರಾಡಲು ಅವರಿಗೆ ಸ್ವಾತಂತ್ರ್ಯ ದೊರೆತಂತೆ ಬೇಸಿಗೆಯ ಸೂಟಿ ಮಕ್ಕಳಿಗೆ ಒಂದು ಥರ ಸವಿಯೂಟ. ಇಂತಹ ಕವಿತೆಯ

---

[೧೯] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೧೧.

ಸಾಲುಗಳು ಹಕ್ಕಿ ಮತ್ತು ಮರಿಗಳು ಕವನ ಸಂಕಲನದಲ್ಲಿ ಮೂಡಿ ಬಂದಿರುವುದು ಸೂಕ್ತವೆನಿಸುತ್ತದೆ.

"ಗಂಡು ಗಚ್ಚೆ ಹಾಕಿ ಸಿದ್ದ
ಬದುವ ಏರಿ ಬಂದನು
ಮೀಸೆ ತಿರುವಿ ಕೊಡಲಿ ಹಿಡಿದು
ಮರದ ಬುಡಕೆ ನಿಂತನು"[೨೦]

**ಕವಿತೆ : ಪುಟ್ಟ ಕೊಟ್ಟ ಅರಿವು**

ಸಂಗಮೇಶ ಗುಜಗೊಂಡರು ಇಲ್ಲಿ ಪರಿಸರದ ಕಾಳಜಿ ಇಟ್ಟುಕೊಂಡು "ಪುಟ್ಟ ಕೊಟ್ಟ ಅರಿವು" ಎಂಬ ಕವನದಲ್ಲಿ ಪುಟ್ಟನ ಪರಿಸರ ಪ್ರೇಮವನ್ನು ಎತ್ತಿ ಹಿಡಿದಿದ್ದಾರೆ. ಪರಿಸರ ಹಾನಿಯಿಂದ ಉಂಟಾಗಬಹುದಾದ ಅನಾಹುತಗಳನ್ನು ತಿಳಿಸಿಕೊಟ್ಟಿದ್ದಾರೆ. ಯಂತ್ರದ ಮಾಲಿನ್ಯದಿಂದ ಮನುಜರ ಮೇಲೆ ಉಂಟಾಗುವ ದುಷ್ಪ ಪರಿಣಾಮವನ್ನು ಮಕ್ಕಳಿಗೆ ಮನವರಿಕೆಯಾಗುವಂತೆ ಕವಿತೆ ಬರೆದಿದ್ದಾರೆ. ಪರಿಸರ ಹಾಳು ಮಾಡುವ ಸಿದ್ದನ ಕೆಲಸ, ಪರಿಸರ ಕಾಳಜಿ ಹೊಂದಿರುವ ಪುಟ್ಟನ ಬಯಕೆ ತನ್ನ ಸ್ವಾರ್ಥಕ್ಕಾಗಿ ಗಿಡಗಳನ್ನು ಕಡಿಯುತ್ತಿರುವ ಸಿದ್ಧನಿಗೆ ಪುಟ್ಟ ಕಿವಿಮಾತು ಹೇಳಿರುವುದು ಪರಿಸರ ಪ್ರೇಮ ಮಕ್ಕಳಲ್ಲಿ ಹೆಚ್ಚಿಸುವಂತೆ ಮಾಡಿದ್ದಾರೆ. ಗುಜಗೊಂಡರು ತಾವು ಕಂಡ ಪರಿಸರ ಮಾಲಿನ್ಯದ ದುಷ್ಪಪರಿಣಾಮಗಳು ಮಕ್ಕಳಿಗೆ ತಿಳಿಸುವುದರೊಂದಿಗೆ ಮಕ್ಕಳಿಗೆ ಪರಿಸರ ಸಂರಕ್ಷಣೆಯ ಒಳ್ಳಯ ಗುಣಗಳು ಮಾನವೀಯ ಮೌಲ್ಯಗಳು ಅವರು ಒಳ್ಳೆಯ ಪರಿಸರಕ್ಕೆ ಹೊಂದಿಕೊಳ್ಳಬೇಕು ಎನ್ನುವುದು ಗುಜಗೊಂಡರ ಸದಾಶಯ ಇಲ್ಲಿ ವ್ಯಕ್ತವಾಗಿದೆ.

"ಬರದ ಕಾಲ
ನೀರಿಗಾಗಿ ಹಾಹಾಕಾರ
ಇನ್ನು ಮುಂದೆ ಮಳೆಯ
ನೀರು ಹಿಡಿಯಬೇಕು
ಕೆರೆಯ ನೀರು
ಬಾವಿ ನೀರು
ಬತ್ತಿ ಹೊಯ್ತು
ಇನ್ನು ಮುಂದೆ
ಇಂಗು ಗುಂಡಿ ಇರಿಸಬೇಕು"[೨೧]

**ಕವಿತೆ : ಇನ್ನು ಮುಂದೆ**

---

[೨೦] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೧೩.
[೨೧] ಸಂಗಮೇಶ ಗುಜಗೊಂಡ, ಹಕ್ಕಿ ಮತ್ತು ಮರಿಗಳು, ಪು. ೨೧.

ಸಂಗಮೇಶ ಗುಜಗೊಂಡರ ಕವನಗಳು ಸರಳವಾದ ಗುಣಗಳಿಂದ ಮತ್ತು ಪ್ರಾಸಗಳ ಮೂಲಕ ಆಕರ್ಷಿಸುವಲ್ಲಿ ಸಂದೇಹವಿಲ್ಲ. ಸಂಗಮೇಶ ಗುಜಗೊಂಡರು ಇನ್ನು ಮುಂದೆ ಈ ಕವನದಲ್ಲಿ ಬರಗಾಲದ ಬವಣೆಯ ಕುರಿತು ನೀರಿಗಾಗಿ ಪರದಾಟ ಪರಿಣಾಮಕಾರಿಯಾಗಿ ಮೂಡಿ ಬಂದಿದೆ. ಪ್ರತಿಯೊಬ್ಬ ವ್ಯಕ್ತಿಗೂ ನೀರಿನ ಅವಶ್ಯಕತೆ ಇದೆ. ನೀರು ಜೀವನಾಧಾರ, ಎಲ್ಲ ಜೀವಿಗಳಿಗೂ ನೀರೆ ಆಧಾರವಾಗಿದೆ. ಗಿಡ ಮರಗಳು ಕಡಿಯುವುದರಿಂದ ಮಳೆ ಕಡಿಮೆಯಾಗುವುದನ್ನು ನಾವೆಲ್ಲರೂ ಗಮನಿಸಬೇಕು. ಮಳೆ ಕಡಿಮೆಯಾದರೆ ಮುಂದೊಂದು ದಿನ ಗಂಭೀರ ಬರಗಾಲ ಎದುರಿಸಬೇಕಾಗುತ್ತದೆ. ಅದಕ್ಕಾಗಿ ಮಳೆಯ ಮೂಲ ಗಿಡಮರಗಳನ್ನು ಬೆಳೆಸುವುದು ಹಸಿರು ಹೆಚ್ಚಿಸುವುದು. ಬಿಸಿಲಿನ ತಾಪದಿಂದ ಬಳಲಿದ ಭೂತಾಯಿ ಮಳೆಯ ಹನಿಗಳ ಸಿಂಚನದಿಂದ ನೆನೆದು ದಣಿಯುವಂತಾಗಬೇಕು. ಕವಿ ಸಂಗಮೇಶ ಗುಜಗೊಂಡರು ಮನುಜ ಮತಕ್ಕೆ ಕಿವಿ ಮಾತೊಂದು ಹೇಳಿದ್ದಾರೆ. ಪರಿಸರ ಉಳಿಸಿ, ಬೆಳೆಸಿ, ಮಳೆ ನೀರು ಸಂಗ್ರಹಿಸಿ ಜೀವ ಜಂತುಗಳಿಗೆ ನೀರು ಆಧಾರ ಈ ಕವಿತೆಯ ಮೂಲಕ ಗುಜಗೊಂಡರು ಸಂದೇಶ ನೀಡಿದ್ದಾರೆ.

"ತುಂಬ ಹಸಿದ ಕೋತಿಯೊಂದು
ದೂರದಿಂದ ದಣಿದು ಬಂದು
ಬೇಲಿ ಹಾರಿ ತೋಟವನ್ನು ಹೊಕ್ಕಿತು
ಅತ್ತ ಇತ್ತ ಹುಡುಕಿ ಅನ್ನ
ಮಾವು ಕಂಡು ಜೊಲ್ಲು ಸುರಿಸಿ
ರಭಸದಿಂದ ಕೊಂಬೆ ಮೇಲೆ ನೆಗೆಯಿತು"

ಸಂಗಮೇಶ ಗುಜಗೊಂಡರ 'ಹಕ್ಕಿ ಮತ್ತು ಮರಿಗಳು' ಮಕ್ಕಳ ಕವನ ಸಂಕಲನ ಮಕ್ಕಳ ಉತ್ಕಟ ಭಾವನೆಗಳನ್ನು ಚಿಮ್ಮಿಸುವ ಸುಂದರ ಕೃತಿಯಾಗಿದೆ. ಕವನಗಳಿಗೆ ಪ್ರಾಸಮಯವಾದ ಸಾಲುಗಳು ಸೊಗಸಾಗಿ ಬಿಂಬಿಸುವಂತಿವೆ. ಸಂಗಮೇಶ ಗುಜಗೊಂಡರ ಕೋತಿಯ ಕೋಪ ಎಂಬ ಕವನದಲ್ಲಿ ತುಂಟ ಕೋಟಿಯ ತುಂಟತನ, ಅದು ಮಾಲಿಕನ ತೋಟದಲ್ಲಿ ಓಡಿ ಬಂದು ಮರದಿಂದ ಮರಕ್ಕೆ ಜಿಗಿಯುತ್ತ, ರೆಂಬೆಯಿಂದ ರೆಂಬೆಗೆ ಜಿಗಿಯುತ್ತ ಅದು ಹಸಿದ ಹೊಟ್ಟೆಗಾಗಿ ಹಣ್ಣುಗಳನ್ನು ತಿನಲೆಂದು ಜಿಗಿಯುತ್ತ, ಓಡುತ್ತ ಊರದಲ್ಲಿಯ ಕಾಗೆ ಬಳಗವನ್ನೆಲ್ಲ ಓಡಿಸಿದಾಗ ಕಾಗೆಗಳು ಕಾ.ಕಾ ಎನ್ನುತ್ತ ಕಿರಿಕಿರಿ ಸಪ್ಪಳ ಮಾಡುವುದನ್ನು ತೋಟದ ಮಾಲಿಕ ನೋಡುತ್ತಾನೆ. ಹಸಿದ ಹೊಟ್ಟೆಯಿಂದ ಹಣ್ಣುಗಳನ್ನು ತಿನ್ನಲೆಂದು ಬಂದ ಕೋತಿಯನ್ನು ತೋಟದ ಮಾಲಿಕ ಕೋಲಿನಿಂದ ಚುಚ್ಚಿ ತಿವಿದಾಗ ಕೋತಿಯು ಹೆದರಿ ಇನ್ನೂ ಸ್ವಲ್ಪ ಹೊತ್ತು ಇಲ್ಲಿ ಇದ್ದರೆ ಪ್ರಾಣ ಸಂಕಟ ಎಂದು ತಿಳಿದು ಹಸಿದ ಹೊಟ್ಟೆ ತಣ್ಣಗಾಗದೆ ಕೋಪದಿಂದ ಕೋತಿ ಬೇರೆ ತೋಟಕ್ಕೆ ಓಡಿ ಹೋಯಿತು. "ಮಾಡಿದ್ದುಣ್ಣೊ ಮಾರಾಯಾ" ಎನ್ನುವ ಗಾದೆ ಮಾತಿನ ಅರ್ಥವನ್ನು ಈ ಕವನದ ಸಾಲುಗಳಲ್ಲಿ ಕವಿ ಸಂಗಮೇಶ ಗುಜಗೊಂಡರು ಸುಂದರವಾಗಿ ವ್ಯಕ್ತ ಪಡಿಸಿದ್ದಾರೆ.

ಸಮಾರೋಪ :

೧. "ಅಮ್ಮಾ ಕೇಳೆ" ಕವನ ಸಂಕಲನದಲ್ಲಿ "ಹದ್ದು ಹೇಳಿದ ಮಾತು "ದುಡಿಮೆಯ ಸರದಾರ" ಯಾವುದು ಸರಿ?' ಕಂದನ ಚೆಲವು" "ನನ್ನ ಉಡುಗೊರೆ" "ಅಜ್ಜನ ಗೊಣಗಾಟ" ಎಲ್ಲ ಕವಿತೆಗಳು ಯಶಸ್ವಿ ಕವಿತೆಗಳಾಗಿವೆ. ಸಂಗಮೇಶ ಗುಜಗೊಂಡರ ಕವಿತೆಗಳ ಸಂಗ್ರಹ ನಿಜಕ್ಕೂ ಸಾರ್ಥಕ ದಾರಿ ಕಂಡಿವೆ. ಭೂಮಿಗೆ ಏನಾಯ್ತು ನೋಡೋಣ "ಪರಿಸರ ಹಾನಿಯ ಕರಾಮತ್ತು" ಈ ಕವಿತೆಗಳು ಪರಿಸರ ರಕ್ಷಣೆಯ ಕುರಿತು ತಿಳಿಸುತ್ತವೆ. ಪರಿಸರಕ್ಕೆ ಸಂಬಂದಿಸಿದ ಕವಿತೆಗಳು ಜ್ವಲಂತ ಸಮಸ್ಯೆಯನ್ನು ತಿಳಿಸಿಕೊಕಡುವ ಪದ್ಯಗಳಾಗಿವೆ. ಅತ್ಯುತ್ತಮ ಮಕ್ಕಳ ಪದ್ಯ ಕಟ್ಟಿ ಕೊಟ್ಟ ಸಂಗಮೇಶ ಗುಜಗೊಂಡರು ಯಶಸ್ಸಿನ ಹಾದಿಯಲ್ಲಿದ್ದಾರೆ.

೨. "ಮತ್ತೆ ಬಂತು ಚೈತ್ರ" ಕವನ ಸಂಕಲನದಲ್ಲಿ "ಪುಟ್ಟನ ರಜಾ ದಿನ" "ಸಂಜೆಯ ಸೊಬಗು" "ಬೇಸಿಗೆಯ ಮೋದ" ಮಳೆಗಾಲದ ಮೋದ" ತಾಯಿ ಭಾರತಿಗೆ ಆರತಿ" ಇಂತಹ ಕವಿತೆಗಳು ಮಕ್ಕಳಲ್ಲಿ ಪರಿಸರ ಪ್ರಜ್ಞೆ, ಅಬಿಮಾನ ಗೌರವ, ಬೆಳೆಸಿಕೊಳ್ಳುವಂತಹ, ಮಾನವೀಯತೆಯ ಮೌಲ್ಯಗಳನ್ನು ಹೊಂದುವಂತಹ ಸಂಗಮೆಶ ಗುಜಗೊಂಡರು "ಮತ್ತೆ ಬಂತು ಚೈತ್ರ" ಕವನ ಸಂಕಲನ ಮಕ್ಕಳಿಂದ ಹಿಡಿದು ಮುದುಕರವರೆಗೆ ಪುಳುಕಿತಗೊಳ್ಳುವಂತೆ ಅರ್ಥಪೂರ್ಣ ಕವಿತೆಗಳಾಗಿವೆ. ಇಲ್ಲಿಯ ಕವನ ಸಂಕಲನದಲ್ಲಿ ಕವಿತೆಗಳ ಶೈಲಿ ಸರಳವಾಗಿವೆ, ಇವರ ಕವಿತೆಗಳು ಮಕ್ಕಳಿಗೆ ಸಂತೋಷ ತಂದು ಕೊಡುವ ಕವಿತೆಗಳಾಗಿವೆ ಎಂದು ಹೇಳಿದರೆ ತಪ್ಪಾಗಲಾರದು.

೩. "ಹಕ್ಕಿ ಮತ್ತು ಮರಿಗಳು" ಕವನ ಸಂಕಲನದಲ್ಲಿ "ಮಳೆಯ ಸೊಗಸು" "ಕಿಟ್ಟನ ಕನಸು" "ಹಣ್ಣಿನ ತೋಟ", "ರಜೆಗಿದೆ ಬಹುಬೆಲೆ" ಪುಟ್ಟ ಕೊಟ್ಟ ಅರಿವು", "ಹಕ್ಕಿ ಮತ್ತು ಮರಿಗಳು", "ಜೇಡ ಮತ್ತು ಬಲೆ" ಹೀಗೆ ಈ ಸಂಕಲನದಲ್ಲಿಯ ಕವಿತೆಗಳು ಚೇತೋಹಾರಿ ಪದ್ಯಗಳಾಗಿವೆ. ಹಲವು ಪದ್ಯಗಳು ಭಾವಲಹರಿಯಲ್ಲಿಯೇ ಮೂಡಿ ಬಂದಿವೆ. ಲಯ, ಪ್ರಾಸ, ಛಂದ ಇಲ್ಲಿಯ ಪದ್ಯಗಳ ಜೀವಾಳವಾಗಿವೆ. ಮಕ್ಕಳು ಹೆಜ್ಜೆಹಾಕಿ ಕೈ ತಟ್ಟಿ ಕುಣಿಯುವಂತಹ ಮಕ್ಕಳ ಬುದ್ಧಿಗೆ ನಿಲುಕುವಂತಹ ಕವಿತೆಗಳು ಇಲ್ಲಿ ಮೂಡಿ ಬಂದಿವೆ. ಮಕ್ಕಳ ಮನರಂಜನೆಯ ಹಾಗೂ ಜ್ಞಾನ ಸಂಪತ್ತನ್ನು ವಿಸ್ತರಿಸುವಂತಹ ಪದ್ಯಗಳು ಮಕ್ಕಳ ಮೆಚ್ಚುಗೆ ಪಡೆಯುವಲ್ಲಿ ಸಾಕ್ಷಿಯಾಗಿವೆ.

ಸಂಗಮೇಶ ಗುಜಗೊಂಡರು ಮಕ್ಕಳ ಮನಸ್ಸು ಬಲ್ಲವರಾಗಿದ್ದಾರೆ. ಪರಿಸರ ಜಾಗೃತಿ, ಮಾನವೀಯ ಮೌಲ್ಯಗಳು ವೈಚಾರಿಕ ಮಟ್ಟವನ್ನು ಕಾಯ್ದುಕೊಂಡು ಕವನ ರಚಿಸುವ ಸಾಮರ್ಥ್ಯ ಅವರಲ್ಲಿದೆ. ಇವರ ಕವಿತೆಗಳು ವಿವಿಧ ಭಾವಗಳನ್ನು ವ್ಯಕ್ತಪಡಿಸುತ್ತವೆ. ನೀತಿಯ ಪಾಠವನ್ನು ಕಲಿಸುತ್ತವೆ. ಪರಿಸರ, ವೈಜ್ಞಾನಿಕ ದೃಷ್ಟಿ, ವೈಚಾರಿಕ ಶಕ್ತಿ,

ಅಹ್ಲಾದವುಂಟು ಮಾಡುವ ಕುತುಹಲ ಕೆರಳಿಸುವ ಮಕ್ಕಳಲ್ಲಿ ಪ್ರೀತಿ ಬಾಂಧವ್ಯ, ಬೆಳೆಸುವಂತಹ ಗಟ್ಟಿಯಾಗಿ ನಿಂತ ಕಪಿತೆಗಳು ಮೆಚ್ಚುವಂತಹವು. ಗುಜಗೊಂಡರ ಕವಿತೆಗಳು ಮಕ್ಕಳ ಮಾನಸಿಕ, ಶಾರೀರಿಕ, ಬೌದ್ಧಿಕ, ಬೆಳವಣಿಗೆಗೆ ಪೂರಕವಾಗಿ ಸಾಮಾಜಿಕ ನೆಲೆಗಳಲ್ಲಿ ಮೂಡಿ ನಿಂತಿವೆ

* * * * *

## ಅಧ್ಯಾಯ : ನಾಲ್ಕು

# ಸಂಗಮೇಶ ಗುಜಗೊಂಡರ ಗದ್ಯ ಸಾಹಿತ್ಯ

**ಪ್ರವೇಶ:**

ಮನುಷ್ಯನ ಜೀವನದಲ್ಲಿ ಪುಸ್ತಕಗಳ ಪಾತ್ರ ಮಹತ್ವದ್ದು ವರ್ಷಗಳಿಂದ ವರ್ಷಕ್ಕೆ ಮನುಷ್ಯ ತಾನು ಕಂಡುಕೊಂಡ ಅನುಭವದಿಂದ ತನ್ನ ಆಲೋಚನೆಯಿಂದ ವಿವೇಚನೆಯಿಂದ ಸಂಪಾದಿಸಿದ ತಿಳುವಳಿಕೆಯನ್ನು ಬರವಣಿಗೆಯ ಮೂಲಕ ಸಂಗ್ರಹಿಸುತ್ತ ಬಂದಿದ್ದಾನೆ. ಮನುಕುಲದ ಮುನ್ನಡೆಯ ದೃಷ್ಟಿಯಿಂದ ಅಸಾಧರಣ ವಿಷಯಗಳು ತಲೆಮಾರುಗಳಿಂದ ತಲೆಮಾರುಗಳಿಗೆ ಸಾಗಿ ಬಂದು ಬಗೆ ಬಗೆಯ ಪುಸ್ತಕಗಳ ರೂಪದಲ್ಲಿ ಮೈವೆತ್ತಿನಿಂದು ನಮ್ಮ ಬದುಕಿನ ಹಾದಿಯಲ್ಲಿ ದಾರಿ ದೀಪಗಳಾಗಿವೆ.

"ನಮ್ಮ ದೇಶದಲ್ಲಿ ಮಕ್ಕಳ ಸಾಹಿತ್ಯಕ್ಕೆ ತಕ್ಕ ಪ್ರೋತ್ಸಾಹವಿಲ್ಲ. ಮಕ್ಕಳ ಸಾಹಿತ್ಯವೆಂದರೆ ಉಪೇಕ್ಷಾ ಭಾವನೆಯಿದೆ. ಅದೇ ವಿದೇಶಗಳಲ್ಲಿ ಶ್ರೇಷ್ಠ ಸಾಹಿತಿಗಳು ಮಕ್ಕಳ ಸಾಹಿತ್ಯವನ್ನು ಇತರೆ ಸಾಹಿತ್ಯಕ್ಕೆ ಸರಿಸಮಾನವೆಂದು ಬಗೆದು ಮಕ್ಕಳ ಸಾಹಿತ್ಯ ಬೆಳೆಯಲು ತಮ್ಮ ಅಮೂಲ್ಯ ಕೊಡುಗೆ ನೀಡಿದ್ದಾರೆ. ಮಕ್ಕಳಿಗಾಗಿಯೇ ಅನೇಕ ಪತ್ರಿಕೆಗಳು, ಪುಸ್ತಕಗಳು, ಪ್ರಕಟಗೊಳ್ಳುತ್ತಿವೆ. ಸಂಗ್ರಹಾಲಯಗಳಿಗೆ ಶಿಕ್ಷಣ ಕೇಂದ್ರಗಳಿವೆ. ಆರೋಗ್ಯ ಕೇಂದ್ರಗಳಿವೆ. ಕ್ರೀಡಾ ಸ್ಥಳಗಳಿವೆ. ಅವರಿಗಾಗಿಯೇ ಪ್ರತ್ಯೇಕ ಸಿನಿಮಾಗಳು ತಯಾರಾಗುತ್ತವೆ. ಮಕ್ಕಳ ಪ್ರಗತಿ ಮತ್ತು ಅವರ ಯೋಗಕ್ಷೇಮಕ್ಕೆ ವಿಶೇಷ ಒತ್ತು ನೀಡಲಾಗಿದೆ.

ನಮ್ಮ ದೇಶದಲ್ಲಿಯೂ ಮಕ್ಕಳ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಡಬೇಕಾಗಿದೆ. ಮಕ್ಕಳ ಸಾಹಿತ್ಯದಲ್ಲಿ ಕವಿತೆ ಕಥೆ ಸಚಿತ್ರಗಳು, ಒಳಗೊಂಡಿರುತ್ತವೆ. ಕಥೆಗಳಲ್ಲಿ ಜನಪದ ಕಥೆಗಳು, ರಾಜ–ರಾಣಿಯರ ಕಥೆಗಳು ಯಕ್ಷ ಕಿನ್ನರ ಕಥೆ ಪಶು ಪಕ್ಷಿಗಳಿಗೆ, ಸಂಬಂಧಿಸಿದ ಕಥೆಗಳು, ಪುರಾಣ ಮತ್ತು ಐತಿಹಾಸಿಕ ಕಥೆಗಳು ಇತ್ಯಾದಿ ಪ್ರಮುಖವಾಗಿವೆ. ಕಥೆ ಹೇಳುವ ಮಾತು ಕೇಳುವ ಪ್ರವೃತ್ತಿ ಹುಟ್ಟಿನಿಂದಲೇ ಬಂದಿದೆ.

ನೈಸರ್ಗಿಕ ಕ್ರೀಯಾ ಕಲಾಪಗಳು ಮಗುವಿನ ಮನಸ್ಸಿನಲ್ಲಿ ಕುತುಹಲವನ್ನು ಹುಟ್ಟಿಸುತ್ತದೆ. ಹೀಗಾಗಿ ಯಾಕೆ? ಹೇಗೆ? ಎಂಬ ಪ್ರಶ್ನೆ ಚಿನ್ಹೆ ಉದ್ಭವಿಸಿ ಪರಿಣಾಮದಲ್ಲಿ ಮಕ್ಕಳಿಗೆ ಈ ಪ್ರಶ್ನೆಗಳಿಗೆ ಕಥೆಗಳೇ ಉತ್ತರಗಳಾಗಿರುತ್ತವೆ. ಮಕ್ಕಳು ಭವಿಷ್ಯದ ಉತ್ತಮ ಪ್ರಜೆಗಳಾಗಬೇಕು. ಹೀಗಾಗಿ ಅವರಿಗೆ ಕುಟುಂಬ, ಸಮಾಜ ಮತ್ತು ದೇಶದ ಬಗ್ಗೆ ಜವಾಬ್ದಾರಿಯನ್ನು ಜಾಗೃತಗೊಳಿಸುವಂಥ ಸಾಹಿತ್ಯವನ್ನು ಕೊಡಬೇಕಾಗಿದೆ. ಮಕ್ಕಳಿಗೆ ಕೊಡುವ ಸಾಹಿತ್ಯದಲ್ಲಿ ಅವರಲ್ಲಿ ಸಾಹಸ, ಪರಾಕ್ರಮ, ನೈತಿಕ ಶಕ್ತಿ, ಸ್ವಾವಲಂಬನೆ, ದೇಶಭಕ್ತಿ ಸೇವಾ ಭಾವನೆ, ಆತ್ಮ ರಕ್ಷಣೆ ಮುಂತಾದ ಗುಣಗಳು ವೃದ್ಧಿಯಾಗುವಂಥ ವಿಷಯಗಳಿರಬೇಕಾದುದು ಅತ್ಯವಶ್ಯಕ. ಮಕ್ಕಳ ಸಾಹಿತ್ಯ ಸರಳವಾಗಿರುತ್ತದೆ. ಅದೇ ಅದರ

ಶ್ರೇಷ್ಠ ಗುಣ. ಆದರೆ ರಚನೆ ಅಷ್ಟೆ ಕಷ್ಟ. ಮಕ್ಕಳ ಬೌದ್ಧಿಕ ಶೈಕ್ಷಣಿಕ ಸಾಮಾಜಿಕ, ನೈತಿಕ, ಭಾಷಿಕ ಕ್ಷಿತಿಜವನ್ನು ರಂಜನೀಯವಾಗಿ ವಿಸ್ತರಿಸಬಹುದಾದ ಕಾರ್ಯ ಅದು, ಮಕ್ಕಳ ಪರಿಸರಕ್ಕೆ ನಿಲುಕುವ ವಸ್ತು. ವಿಶ್ಲೇಷಣೆಯಾಗಿದ್ದರೆ ಮಾತ್ರ ಯಶಸ್ವಿಯಾಗುತ್ತದೆ. ಖಚಿತ ಅಭಿಪ್ರಾಯದ ಪೂರ್ಣತೆಯನ್ನು ಮೂಡಿಸಲಾಗದಿದ್ದರೂ ಜ್ಞಾನ ವಿಕಾಸಕ್ಕೆ ಪೂರಕವಾಗುವಂತಿರಬೇಕು. ಸಂದಿಗ್ಧತೆಗೆ ಎಡೆಯಿಲ್ಲದೆ ಚೊಕ್ಕ ಬರಹದ ಮಾದರಿಯಾಗಿರಬೇಕು, ಮಕ್ಕಳಾಗಿಯೇ ಬರೆಯಲು ಹೊರಟರೂ ಎಷ್ಟೋ ವೇಳೆ ಚಿಂತನೆ ಹಾಗೂ ಅಭಿವ್ಯಕ್ತಿ ಆ ಉದ್ದೇಶವನ್ನು ಮೀರುತ್ತದೆ. ಮಕ್ಕಳಿಗಾಗಿ ಬರೆಯಬೇಕೆಂಬ ಉತ್ಸಾಹಶೀಲ ಸಾಹಿತಿಗಳು ಅನೇಕರಿದ್ದಾರೆ. ಅದೊಂದು ವಿಶೇಷ ಕಲೆ, ಆರೋಗ್ಯಕರ ಬೆಳವಣಿಗೆಯನ್ನು ಕಾಣುವ ವಸ್ತುವಿನ ಆಯ್ಕೆ, ಸರಳ ಭಾಷೆಯ ಸೊಬಗು, ಉತ್ತಮ ನಿರೂಪಣೆ, ಆಸಕ್ತಿದಾಯಕ ಬಣ್ಣನೆ, ಬಹುವರ್ಣದ ಪೂರಕ ಚಿತ್ರಗಳು, ಇರಬೇಕು, ಮಕ್ಕಳ ಮನಸ್ಸು ಮತ್ತು ಸಾಮರ್ಥ್ಯದ ಹಿನ್ನೆಲೆಯಲ್ಲೇ ಆದರ್ಶ ಮೌಲ್ಯಗಳು ಹಿತವಾಗಿರಬೇಕು. ನಾನು ನುಡಿಯ ಬಗೆಗೆ ಪ್ರೇಮವನ್ನು ಬೆಳೆಸುವ ವಿವೇಕ ಸಾರ್ವಕಾಲಿಕವಾದುದು, ಜ್ಞಾನಾರ್ಜನೆಯೊಂದಿಗೆ ರಂಜನೀಯತೆಯ ರಹಸ್ಯವನ್ನು ಕಥೆಗಳಲ್ಲಿ ನಿರೂಪಿಸುವುದು ಮರೆಯಬಾರದು.

"ಜಾನಪದ ಕಥೆಗಳು ಮನರಂಜನೆಯೊಂದಿಗೆ ಬೌದ್ಧಿಕ ವಿಕಾಸಕ್ಕೂ ಸಹಕಾರಿ. ಅದರಲ್ಲಿಯೂ ವಿದೇಶಿ ಜಾನಪದ ಕಥೆಗಳು ಅಂತರಾಷ್ಟ್ರೀಯ ಸದ್ಭಾವನೆಯನ್ನು ಜಾಗೃತಗೊಳಿಸುವಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ. ಮಕ್ಕಳಲ್ಲಿ ಮೌಲ್ಯಯುತ ವ್ಯಕ್ತಿತ್ವ ರೂಪಿಸಲು ಕಥೆಗಳು ತುಂಬ ಸಹಕಾರಿಯಾಗಿವೆ. ಮಕ್ಕಳ ಮನಸ್ಸನ್ನು ಅರಳಿಸಿ ಕುತುಹಲ ಕೆರಳಿಸಿ ಕಲ್ಪನೆಯನ್ನು ರೂಪಿಸಿ ಭಾವನೆಗಳನ್ನು ಪ್ರಚೋದಿಸಿ ಆನಂದದಲ್ಲಿ ಮೀಯಿಸಿ ಅವರಲ್ಲಿ ಗಟ್ಟಿ ವ್ಯಕ್ತಿತ್ವವನ್ನು ತುಂಬುವುದೇ ಕಥೆಗಳ ಉದ್ದೇಶ. ಮಕ್ಕಳ ಮನಸ್ಸು ವಿಕಾರಗೊಳ್ಳದೆ, ದುರ್ಮಾರ್ಗದಲ್ಲಿ ಹರಿದಾಡದಂತೆ ಅವರನ್ನು ಸುಶೀಲ, ಸದ್ಗುಣಶೀಲರಾಗುವಂತೆ ಮಾಡುವುದೇ ಕಥೆಗಳ ಧ್ಯೇಯವಾಗಿದೆ."[೨೨]

ಸಂಗಮೇಶ ಗುಜಗೊಂಡರ ಕಥಾ ಸಾಹಿತ್ಯವು ಈ ಎಲ್ಲ ಧೋರಣೆಗಳನ್ನು ಅಳವಡಿಸಿಕೊಂಡು ಬೆಳೆದಿದೆ. ಮಕ್ಕಳ ಸಾಹಿತ್ಯದಲ್ಲಿ ಕಥೆ ಹಾಗೂ ಜೀವನ ಚರಿತ್ರೆಗಳು ಪ್ರಧಾನ ಪಾತ್ರ ವಹಿಸುತ್ತವೆ. ಮಕ್ಕಳ ಮನಸ್ಸಿಗೆ ಮುಟ್ಟುವಂತೆ ಜೀವನ ಗಾಥೆಯನ್ನು ಚರಿತ್ರೆ ರೂಪದಲ್ಲಿ ಕಥಾ ರೂಪದಲ್ಲಿ ಹೇಳುವುದು ಮುಖ್ಯ. ಸಂಗಮೇಶ ಗುಜಗೊಂಡರ ಕಥೆಗಳಲ್ಲಿ ಇನ್ನೊಂದು ಹೊಸತನವನ್ನು ಕಾಣುತ್ತೇವೆ. ಏನೆಂದರೆ ಕಥೆಗಳಲ್ಲಿ ವೈಚಾರಿಕತೆಯ ನಿರೂಪಣಾ ಶೈಲಿಯನ್ನು ಗಮನಿಸುತ್ತೇವೆ.

---

[೨೨] ಸಿ.ಕೆ. ನಾವಲಗಿ, ಸತ್ಯಾರ್ಥಿ, ಪು. ೧೯೨.

ನಮ್ಮದು ಕಥಾ ಸಂಸ್ಕೃತಿ ಚಿಕ್ಕವರಿದ್ದಾಗ ಅಜ್ಜಿಯ ಮಡಿಲಲ್ಲಿ ಕುಳಿತುಕೊಂಡು ಕಥೆಗಳನ್ನು ಕೇಳಿ ಕೌತುಕವನ್ನು ಅನುಭವಿಸಿದ್ದೇವೆ. ಕಥೆಗಳು ನಮಗೆ ರೋಚಕವನ್ನುಂಟು ಮಾಡುತ್ತವೆ. ಕಥೆಗಳಲ್ಲಿ ಪ್ರಾಣಿಗಳು, ಹಕ್ಕಿಗಳು, ಪಕ್ಷಿಗಳು ಮಾತಾಡುತ್ತವೆ. ಸಭೆ ನಡೆಸುತ್ತವೆ. ಬುದ್ಧಿ ಕಲಿಸುತ್ತವೆ. ಪಾಠವನ್ನು ಭೋಧಿಸುತ್ತವೆ. ನಡತೆಯನ್ನು ಹೇಳಿಕೊಡುತ್ತವೆ. ಇಷ್ಟೆಲ್ಲಾ ರೋಚಕ ಕಥೆಗಳ ಗೂಡು ನಮ್ಮ ಮನಸ್ಸು ಅಂಥ ಮನಸ್ಸು ಕಥೆ ಹೆಣೆಯಲಿಕ್ಕೆ ಪ್ರಾರಂಬಿಸಿದರೆ ನಮ್ಮನ್ನು ಅದ್ಭುತ ಮಾಯಾಲೋಕಕ್ಕೆ ಕರೆದೊಯ್ಯುತ್ತದೆ.

ಸಾಹಿತ್ಯವು ಭಾಷೆಯ ಮಾಧ್ಯಮದ ಒಂದು ಸಂಕೀರ್ಣ ಕಲೆಯಾಗಿದೆ. ಇದರಲ್ಲಿ ಸಂಕೀರ್ಣತೆಗೆ ಬುದ್ದಿ ನಿಷ್ಟ ಮತ್ತು ಭಾವನಿಷ್ಠ, ಎಂಬ ಎರಡು ಪ್ರಕಾರಗಳಿವೆ. ಮಕ್ಕಳ ಸಾಹಿತ್ಯ ತನ್ನದೇ ಆದ ವೈಶಿಷ್ಟ್ಯತೆಗಳಿಗಿಂತ ಇತರ ಸಾಹಿತ್ಯ ಪ್ರಕಾರಗಳಿಗಿಂತ ಭಿನ್ನವಾಗಿದೆ. ಕನ್ನಡ ಸಾಹಿತ್ಯದಲ್ಲಿ ಕಥಾ ಸಾಹಿತ್ಯಕ್ಕೆ ವಿಶಿಷ್ಠ ಸ್ಥಾನವಿದೆ. ಮಾನವನು ಬುದ್ದಿ ಶಕ್ತಿ, ವಿಚಾರ ಶಕ್ತಿಯಿಂದ, ಪ್ರಾಣಿ, ಪಕ್ಷಿ, ಕ್ರಿಮಿ ಕೀಟಗಳಿಗಿಂತ ಭಿನ್ನವಾಗಿದ್ದಾನೆ. ಮಕ್ಕಳ ಸಾಹಿತ್ಯದಲ್ಲಿ ಕಥೆಗಳು ತನ್ನದೇ ಆದ ಸ್ಥಾನವನ್ನು ಉಳಿಸಿಕೊಂಡು ಬಂದಿವೆ. ಮಾನವನ ಜೀನವನದ ಸರ್ವತೋಮುಖ ಅಭಿವೃದ್ಧಿಗೆ ಮಕ್ಕಳ ಕಥಾ ಸಾಹಿತ್ಯ ಪೂರಕವಾಗಿದೆ.

ಸಂಗಮೇಶ ಗುಜಗೊಂಡರ ಮೊದಲ ಕಥಾ ಸಂಕಲನ "ನೂರು ನಾಣ್ಯ ಮೂರು ಮಾತು" ೧೯೯೫ ರಲ್ಲಿ ಪ್ರಕಟಗೊಂಡಿದೆ. ಈ ಕೃತಿ ಮತ್ತೆ ೨೦೧೦ ರಲ್ಲಿ ಮರು ಮುದ್ರಣಗೊಂಡಿತು. ಇದು ಸಂತೋಷದ ವಿಷಯ. ಈ ಕಥಾಸಂಕಲನದಲ್ಲಿ ಒಟ್ಟು ಹತ್ತು ಕಥೆಗಳನ್ನು ಒಳಗೊಂಡಿದೆ. ಇಲ್ಲಿಯ ಎಲ್ಲಾ ಕಥೆಗಳು ಮಕ್ಕಳ ಮನಸ್ಸನ್ನು ಆಕರ್ಷಣೆಗೊಳ್ಳುವುದರೊಂದಿಗೆ ಹಿರಿ–ಕಿರಿಯರನ್ನು ರಂಜಿಸುವ ಕಥೆಗಳಾಗಿವೆ. ಹೀಗಾಗಿಯೇ 'ನೂರು ನಾಣ್ಯ ಮೂರು ಮಾತು' ಕಥಾ ಸಂಕಲನ ದ್ವಿತಿಯ ಮುದ್ರಣಗೊಂಡಿದ್ದು ಅವರ ಮಹತ್ತತೆಗೆ ಸಾಕ್ಷಿಯಾಗಿದೆ.[೨೩]

ನೂರು ನಾಣ್ಯ ಮೂರು ಮಾತು" ಸುಂದರವಾಗಿ ಮೂಡಿ ಬಂದ ಕಥಾ ಸಂಕಲನ ಇದಾಗಿದೆ.

ಮಣ್ಣಿನಲ್ಲೇ ಚಿನ್ನವಿದೆ, ಬದಲಾದ ವ್ಯಾಪಾರಿ, ಪರಮ ಧರ್ಮ, ಗುಟ್ಟಿನ ಪಾಲು, ಧೀರ ಬಲ್ಲಾಳ, ಅಜ್ಜಿ ಹೇಳಿದ ಮಾತು, ವಿಚಿತ್ರರಾಜ ಅಪರೂಪ ಪಂಡಿತ, ಇನಾಮು ಪತ್ರ, ಅಬು ಬಿಟ್ಟು ಅಂಜಾರಕ್ಕೆ, ನೂರು ನಾಣ್ಯ ಮೂರು ಮಾತು.

ಪ್ರತಿಯೊಂದು ಕಥೆಗಳಲ್ಲಿ ನೈತಿಕ ಮೌಲ್ಯ, ಆದರ್ಶಗುಣ, ಪರೋಪಕಾರದ ನೀತಿಯ ಮಾತು, ಕಥೆಗಳು ತಿಳಿಸಿಕೊಡುತ್ತವೆ. ಮಕ್ಕಳಿಗೆ ಕಥೆಗಳೆಂದರೆ ಬಹಳ ಇಷ್ಟ. ಮಕ್ಕಳು ಕಥೆಗಳನ್ನು ಓದಿ ಆನಂದ ಪಡುತ್ತಾರೆ. ನಮ್ಮ ಮಕ್ಕಳು ಕೇವಲ ವಿದ್ಯಾವಂತರಾದರೆ ಸಾಲದು ಅವರು ಸಚ್ಚಾರಿತ್ರ್ಯವಂತರಾಗಬೇಕು. ಅಂದಾಗ ಮಾತ್ರ ಭವ್ಯ ಭಾರತದ ಕನಸು

---

[೨೩] ಸಂಗಮೇಶ ಗುಜಗೊಂಡ, ನೂರು ನಾಣ್ಯ ಮೂರು ಮಾತು', ಪು. ೪.

ನನಸಾಗುತ್ತದೆ. ಮಕ್ಕಳಿಗೆ ಸಿಹಿ ಸಾಹಿತ್ಯ ಪೂರೈಸುವುದೇ ಮಕ್ಕಳ ಸಾಹಿತ್ಯದ ಉದ್ಧೇಶವಾಗಿದೆ.

**ಮಣ್ಣಿನಲ್ಲೇ ಚಿನ್ನವಿದೆ:** ಭರಮ ಮತ್ತು ಧರಮ ಅಕ್ಕ ಪಕ್ಕ ಹೊಲದ ರೈತರು, ಇಬ್ಬರೂ ಬಡವರು, ಆದರೆ ಮೈಮುರಿದು ದುಡಿಯುತ್ತಲೂ ಇರಲಿಲ್ಲ. ಅಲ್ಪ ಸ್ವಲ್ಪ ಬೆಳೆದುದರಲ್ಲಿಯೇ ಜೀವಿಸಿಕೊಂಡು ಇದ್ದರು. ಆಕಸ್ಮಿಕವಾಗಿ ಇಬ್ಬರಲ್ಲಿ ಒಬ್ಬನ ಹೊಲ ಚೆನ್ನಾಗಿ ಬೆಳೆದರೆ ಇನ್ನೊಬ್ಬನಿಗೆ ಅಸೂಯೆ. ಆದರೆ ದುಡಿದು ಹೆಚ್ಚು ಬೆಳೆಯುವ ವಿಚಾರ ಮಾಡಿದವರಲ್ಲ. ಇವರ ನೆರೆಯಲ್ಲಿಯೇ ಪರಮ ಕೃಷಿ ಮಾಡಿಕೊಂಡಿದ್ದನು. ಅವನು ಇವರ ಗೊಡವೆಗೆ ಹೋಗದೇ ತನ್ನಷ್ಟಕ್ಕೆ ತಾನು ದುಡಿಯುತ್ತಾ ಸಹಕಾರ ಮನೋಭಾವನೆಯಿಂದ ಇದ್ದ. ಪರಮನು ಸಹ ಬಡ ರೈತನೇ ಆದರೆ ದುಡಿಯುವುದರಲ್ಲಿ ಅವನು ಉದಾಸೀನನಾಗಿರಲಿಲ್ಲ. ಒಂದಿನ ಮೂವರು ಕಲೆತು ಮಾತಾಡುವಾಗ ಕೆಲ ಹೊತ್ತಿನ ನಂತರ ಸನ್ಯಾಸಿಯೊಬ್ಬ ಬಂದನು. ಭರಮ, ಧರಮ, ಪರಮ ಮೂವರು ಅವರ ಕಾಲಿಗಿ ಬಿದ್ದಾಗ ಎನು ಎಲ್ಲ ಕುಶಲವೇ ಎಂದು ಸನ್ಯಾಸಿ ಕೇಳಿದರು. ನಿಮ್ಮ ಆಶೀರ್ವಾದ ಗುರುಗಳೇ ನಾವು ಚೆನ್ನಾಗಿ ಇದೀವಿ ಎಂದು ಮೂವರೂ ಹೇಳಿದರು.

ಆಯ್ತು ಭಗವಂತ ನಿಮಗೆಲ್ಲಾ ಸದಾ ಆನಂದ ಕರುಣಿಸಲಿ ಎಂದು ಸನ್ಯಾಸಿಗಳು ಇವರ ತಲೆ ನೇವರಿಸಿದರು. ತೇಜೋ ಮುನಿಗಳಾಗಿದ್ದ ಸನ್ಯಾಸಿಗಳನ್ನು ಕಂಡು ಭರಮ "ಅಪ್ಪಾ ಬಡವರು ನಾವು ನಮ್ಮ ಉದ್ಧಾರಕ್ಕೆ ಆಶೀರ್ವಾದ ಮಾಡಿರಿ, ಎಂದು ಕೇಳಿಕೊಂಡ. ಸನ್ಯಾಸಿಗಳಿಗೆ ಕೊಂಚ ಆಶ್ಚರ್ಯವಾಯಿತು. ಇವನ ಮಾತಿನಿಂದ ನಕ್ಕು ಹೇಳಿದರು. "ಆಯ್ತು ಹೋಗಿರಿ ಮಣ್ಣಿನಲ್ಲೇ ಚಿನ್ನವಿದೆ ಎಂದು ಇಷ್ಟು ಹೇಳಿ ಸನ್ಯಾಸಿಗಳು ಅಲ್ಲಿಂದ ಹೊರಟರು. ಕೆಲ ವರ್ಷಗಳ ನಂತರ ಪರಮ, ಭರಮ, ಧರಮ, ಮೂವರು ತೋಟಗಳನ್ನು ಮಾಡಿದರು. ದುಡಿದು ಮೂವರು ಚಿನ್ನಕ್ಕಿಂತ ಬೆಲೆಬಾಳುವ ಮಣ್ಣನ್ನು ನಿರ್ಮಿಸಿದರು, ಸಂತಸದ ಜೀವನ ತಮ್ಮದಾಗಿಸಿಕೊಂಡರು.

ಇಲ್ಲಿ ಆಲಸಿಗಳಾಗದೆ ದುಡಿದು ತಿನ್ನುವ ಸಂಪಾದಿಸುವ ಯೋಚನೆಯನ್ನು ಮಕ್ಕಳಲ್ಲಿ ತುಂಬುವ ಹಂಬಲ ಸಂಗಮೇಶ ಗುಜಗೊಂಡರದು. ಮಕ್ಕಳಿಗೆ ಪ್ರೀಯವಗಬಹುದಾದ ಇಂಥ ಕಥೆಗಳನ್ನು ಸಂಗಮೇಶ ಗುಜಗೊಂಡರು ಇನ್ನೂ ಹೆಚ್ಚು ಹೆಚ್ಚಾಗಿ ಬರೆಯುವುದರೊಂದಿಗೆ ಆಧುನಿಕ ಪರಿಸರವನ್ನು ತಮ್ಮ ಕಥೆಗಳಲ್ಲಿ ಒಡಮೂಡಿಸಿಕೊಂಡಿದ್ದಾರೆ.

**ಬದಲಾದ ವ್ಯಾಪಾರಿ :** ಇಬ್ಬರು ವಜ್ರದ ವ್ಯಾಪಾರಿಗಳಿದ್ದರು. ಅವರ ಹೆಸರು ಮೋಟುಲಾಲ ಮತ್ತು ಛೋಟುಲಾಲ, ನಮ್ಮ ದೇಶದಲ್ಲಲ್ಲದೇ ವಿದೇಶಗಳಿಗೂ ಹೋಗಿ ವ್ಯಾಪಾರ ಮಾಡುತ್ತಿದ್ದರು. ಅನೇಕ ವರ್ಷಗಳ ವ್ಯಾಪಾರದಿಂದಾಗಿ ಸಾಕಷ್ಟು ಸಂಪಾದಿಸಿ, ಕೋಟ್ಯಾಧೀಶರಾಗಿದ್ದರು. ಛೋಟುಲಾಲನಿಗೆ ತುಂಬಿತ್ತು ಶ್ರೀಮಂತಿಕೆಯ ಅಹಂಕಾರವು

ಅವನ ಗೆಳೆಯ ಮೋಟುಲಾಲನು ಬಡವರ ಬಗ್ಗೆ ಅನುಕಂಪವುಳ್ಳವನು ಆಗಿದ್ದನು. ನಾಲ್ಕು ಜನ ಗೆಳೆಯರ ಮಧ್ಯದಲ್ಲಿ ಇದ್ದವನು.

ಇಲ್ಲಿ ಇಬ್ಬರ ಗೆಳೆಯರ ನಡುವೆ ಒಂದು ವ್ಯತ್ಯಾಸವನ್ನು ಕಂಡುಕೊಳ್ಳಬಹುದು, ಒಬ್ಬನಿಗೆ ಅಹಂಕಾರ ಒಬ್ಬನಿಗೆ ಕರುಣೆ ದೇವರು ಕೊಟ್ಟುದರಲ್ಲಿಯೇ ಸುಖ ಸಂತೋಷ ಪಟ್ಟುಕೊಳ್ಳಬೇಕು, ಎಂಬ ತತ್ವ ಮೋಟುಲಾಲನದು, ಇನ್ನೊಂದೆಡೆ ಶ್ರೀಮಂತಿಕೆಯ ಮದದಲ್ಲಿ ಮಿಂದೆದ್ದ ಭೋಟುಲಾಲ, ಇಬ್ಬರಿಗೂ ಮಕ್ಕಳಿದ್ದರು, ಮಕ್ಕಳೂಕೂಡಾ ಅವರಂತೆಯೇ ಬೆಳೆದರು, ಭೋಟುಲಾಲನ ಮಗ ಬುರಿಲಾಲ ಮೋಟುಲಾಲನ ಮಗ ಚುನ್ನಿಲಾಲ, ಬುರಿಲಾಲ ಅಹಂಕಾರಿಯಾಗಿದ್ದನು, ಚುನ್ನಿಲಾಲನು ಕರ್ತವ್ಯ ನಿಷ್ಠೆ ಸರಳತೆಯಿಂದ ಕೂಡಿದ್ದನು, ಭೋಟುಲಾಲನ, ಬುರಿಲಾಲನ ಅಹಂಕಾರ ಒಂದಿನ ಅಡಗಿ ಹೋಯಿತು, ಪರಿವರ್ತನೆಗೊಂಡರು. ಸರಳತೆಯಿಂದ ಜೀವನ ಸಾಗಿಸಿ ಅವರೂ ನಾಲ್ಕು ಜನರ ಬಾಯಿಯಲ್ಲಿ ಉಳಿದರು.

ಸಂಗಮೇಶ ಗುಜಗೊಂಡರು ಅಹಂಕಾರದಿಂದ ಎನನ್ನೂ ಸಾಧಿಸಲು ಸಾಧ್ಯವಿಲ್ಲ. ಕರ್ತವ್ಯ ನಿಷ್ಠೆ, ಸರಳತೆ ಇದ್ದರೆ, ನಮ್ಮ ವ್ಯಾಪಾರದಲ್ಲಿ ಲಾಭ ಪಡೆಯಬಹುದು. ನಾಲ್ಕು ಜನರ ಸಹಾಯ, ಸಹಕಾರ, ಸಂಪಾದಿಸಬಹದು, ದುರಹಂಕಾರ ನಮ್ಮನ್ನು ನಾಶ ಮಾಡುತ್ತದೆ. 'ಹಾಸಿಗೆ ಇದಷ್ಟು ಕಾಲು ಚಾಚಬೇಕು. ಎಂದು ಗುಜಗೊಂಡರು ಕರೆ ನೀಡುತ್ತಾರೆ. ಈ ಕಥೆಯಲ್ಲಿ ಕೆಟ್ಟ ಮೇಲೆ ಬುದ್ದಿ ಬಂದ ಹಾಗೆ" ಭೋಟುಲಾಲ, ಬುರಿಲಾಲ, ಪರಿವರ್ತನೆಗೊಂಡು ಸಭ್ಯರಾಗಿ ಬಾಳಲು ನಿರ್ಧರಿಸಿದ್ದು ಬದುಕಿನ ವಾಸ್ತವತೆಯನ್ನು ವ್ಯಕ್ತ ಪಡಿಸುತ್ತದೆ. ಕಥೆ ಪರಿಣಾಮಕಾರಿಯಾಗಿ ಬಂದಿದೆ.

**ಪರಮಧರ್ಮ** : ಬಹು ಕಾಲದ ಹಿಂದೆ ಪಶುಪತಿ ಎಂಬ ರಾಜನಿದ್ದನು, ಆಡಳಿತದಲ್ಲಿ ಸಹಾಯ ಮಾಡಲು ಆ ರಾಜನಿಗೆ ಆಪ್ತ ಮಂತ್ರಿಯೊಬ್ಬನಿದ್ದನು. ಅವನ ಹೆಸರು ಪುಂಡಲೀಕ ಪಶುಪತಿಯು ಜನಪ್ರೀಯ ಅರಸು ಎಂಬ ಹೆಸರನ್ನು ಗಳಿಸಿದ್ದನು. ಇದಕ್ಕೆ ಜಾಣನಾಗಿದ್ದ ಮಂತ್ರಿ ಪುಂಡಲೀಕನು ಬಹುಮಟ್ಟಿಗೆ ಕಾರಣನಾಗಿದ್ದನು. ರಾಜನು ಅನೇಕ ಹವ್ಯಾಸಗಳಲ್ಲಿ ಪಂಡಿತರ ಸಭೆಗಳನ್ನು ಮೇಲಿಂದ ಮೆಲೆ ಕರೆದು ಹೊಸ ಹೊಸ ವಿಷಯಗಳನ್ನು ತಿಳಿದುಕೊಳ್ಳುವುದು ಒಂದಾಗಿತ್ತು. ಕಾಕಾ ಕಾಗೆ ಹಾರಾಡಿ ಬಂದು ಎತ್ತಿನ ಹಣೆಯ ಮೇಲೆ ಕುಳಿತಿತು, ತನ್ನ ಕೊಕ್ಕಿನಿಂದ ಕುಕ್ಕಿ-ಕುಕ್ಕಿ ಕೀಟಗಳನ್ನು ತಿಂದು ತೃಪ್ತಿ ಪಟ್ಟುಕೊಳ್ಳುತ್ತಿತ್ತು. ಕಾಗೆಗೆ ಆಹಾರ ಎತ್ತಾಗೆ ಸಂಕಟವಾಗಿತ್ತು. ಇಲ್ಲಿ ಎತ್ತು ಮೌನಿಯಾಗಿರುವುದು ಸಹಜ ಧರ್ಮವಾಗಿದೆ. ಈ ಕಥೆಯಲ್ಲಿ ಮಂತ್ರಿಯು ರಾಜನಿಗೆ ಧರ್ಮದ ಬಗ್ಗೆ ತಿಳಿಸುತ್ತ ಕುದುರೆಯ ಮೇಲೆ ರಾಜ್ಯವನ್ನು ಸುತ್ತಾಡುತ್ತ ಸಹಜ ಧರ್ಮ, ಶ್ರೇಷ್ಠ ಧರ್ಮ, ಪರಮಧರ್ಮ ಇವುಗಳ ಬಗ್ಗೆ ಕುರಿತು ವಿವರಿಸಿ ಹೇಳಿದಾಗ ರಾಜನಿಗೆ ಎಲ್ಲಿಲ್ಲದ ಸಂತೋಷವಾಯಿತು.

ರಾಜ ಮತ್ತು ಮಂತ್ರಿ ಸಂವಾದಲ್ಲಿ ತೊಡಗಿದಾಗ ಮಂತ್ರಿಯ ಬುದ್ಧಿವಂತಿಕೆಯನ್ನು ಕಂಡ ರಾಜ ಬೆರಗಾಗಿ ಮನದಲ್ಲಿ ಹರ್ಷ ವ್ಯಕ್ತಪಡಿಸುತ್ತಿದ್ದ. ಕಷ್ಟ ಸುಖಗಳು, ಶಾಶ್ವತವಲ್ಲ. ಒಬ್ಬರಿಗೊಬ್ಬರು ಸಹಕಾರ ಮನೋಭಾವದಿಂದ ಬಾಳಬೇಕು. ಇಂತಹ ಗುಣಗಳನ್ನು ಅಳವಡಿಸಿಕೊಳ್ಳಲು ಸಂಗಮೇಶ ಗುಜಗೊಂಡರು ಈ ಕಥೆಯಲ್ಲಿ ಸಲಹೆ ನೀಡುತ್ತಾರೆ. ಕಾಗೆ ಎತ್ತಿನ ಉಣ್ಣೆ ಆಯ್ದು ತಿನ್ನುವುದು ಸಹಜಧರ್ಮ, ಕೆಚ್ಚಲು ನೋಯುವಂತೆ ಗುದ್ದಿ ಗುದ್ದಿ ಮೊಲೆ ಕುಡಿಸುವ ಕಷ್ಟದಲ್ಲೂ ಕರ್ತವ್ಯ ಮರೆಯದ ಹಸುವಿನದು ಶ್ರೇಷ್ಠ ಧರ್ಮ, ತಾನು ಮೇಯುತ್ತಿರುವಾಗ ತನ್ನೊಂದಿಗೆ ಸಾಗುತ್ತಿರುವ ಬೆಳ್ಳಕ್ಕಿಯನ್ನು ಪೀಡಿಸದೆ ಸಾಗುವ ಎಮ್ಮೆಯದು ಅತೀ ಶ್ರೇಷ್ಠ ಧರ್ಮ ಎಂಬುದನ್ನು ಪರಮಧರ್ಮ ಸಹಿಷ್ಣುತೆ ಮತ್ತು ಸೌಹಾರ್ದ ಬಾಳುವೆಯ ಸಂಕೇತವಾಗಿದೆ.

**ಗುಟ್ಟಿನ ಪಾಲು :** ಒಂದು ಊರಿನಲ್ಲಿ ಸೋಮನಾಥನೆಂಬ ರೈತನಿದ್ದ ದುಡಿಮೆಗಾರನಾಗಿದ್ದ. ಅವನು ಪೂರ್ವಜರ ಆಸ್ತಿಯನ್ನು ಕಾಪಾಡಿಕೊಂಡು ಬರುವುದಲ್ಲದೇ ಕೆಲವೊಂದಿಷ್ಟು ಜಮೀನು ಸ್ವಂತ ಗಳಿಸಿದ್ದ. ಎಮ್ಮೆ ಆಕಳುಗಳನ್ನು ಸಾಕಿಕೊಂಡು ಸುಖವಾಗಿದ್ದನು. ಸೋಮನಾಥನಿಗೆ ನಾಲ್ಕು ಜನ ಗಂಡು ಮಕ್ಕಳು ತಂದೆಯ ಜೊತೆಯಲ್ಲಿ ನಾಲ್ವರೂ ಪಶುಪಾಲನೆ ಬೇಸಾಯ ಮಾಡುತ್ತಿದ್ದರು. ತನ್ನ ಅನುಭವ ಮಾರ್ಗದರ್ಶನಗಳ ಮೂಲಕ ಮಕ್ಕಳನ್ನು ತನ್ನಂತೆ ಕಠಿಣ ಪರಿಶ್ರಮಗಳನ್ನಾಗಿಸಲು ಸೋಮನಾಥ ಸದಾ ಪ್ರಯತ್ನಿಸುತ್ತಿದ್ದನು.

ಬೇಸಾಯ ಮಾಡುವ ಸೋಮನಾಥನು ನಾಲ್ಕು ಜನ ಗಂಡು ಮಕ್ಕಳೊಂದಿಗೆ ಜೀವನ ಸಾಗಿಸುತ್ತಿದ್ದನು. ಹಲವು ವರುಷಗಳು ಉರುಳಿದವು. ಅವನಿಗೆ ಮುಪ್ಪು ಬಂದಿತು. ಅವನು ಮಕ್ಕಳನ್ನು ಕರೆದು ಅವರವರ ಪಾಲು ಹಂಚಿಕೊಟ್ಟನು. ಕಿರಿಯ ಮಗನ ಶ್ರದ್ಧೆ ಕಂಡು ಕಣ್ಣಲ್ಲಿ ನೀರು ತುಂಬಿ ಬಂತು. ಸೋಮನಾಥನ ಕಿರಿಯ ಮಗ ತೋರಿಸುವ ಹಿರಿಯ ಗುಣ ಅವನ ಸೋದರ ಪ್ರೇಮದ ಕಥೆ ಗುಟ್ಟಿನ ಪಾಲು ಕಥೆಯಲ್ಲಿದೆ. ಅಪ್ಪ ಕೊಟ್ಟ ಗುಟ್ಟಿನ ನಿಧಿಯನ್ನು ಸ್ವಂತಕ್ಕೆ ಬಳಸಿಕೊಳ್ಳಲು ಒಲ್ಲದ ಕಿರಿಯ ಮಗನ ಆದರ್ಶ ಅನುಕರಣೀಯವೆನಿಸುತ್ತದೆ. ಕಥೆಗಳು ರೀತಿ ನೀತಿ ಬೋಧಿಸುವಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇಲ್ಲಿ ಸೋಮನಾಥನ ಕಿರಿಯ ಮಗನ ಸ್ವಭಾವದ ಆಚಾರ ವಿಚಾರಗಳು ಆಕರ್ಷಕ ಆದರ್ಶ ಗುಣಗಳು ಸ್ವಾರಸ್ಯವಾಗಿ ಮೂಡಿ ಬಂದಿದೆ. ಒಳ್ಳೆಯ ವಿಚಾರ ಧಾರೆಯುಳ್ಳ ಕಥೆಗಳು ಮಕ್ಕಳಿಗೆ ಪ್ರೇರಣೆ ನೀಡುತ್ತವೆ. ಮಕ್ಕಳ ಕಥೆಗಳನ್ನು ಹಲವು ಉದ್ದೇಶಗಳಿಂದ ಬರೆಯಬೇಕಾಗುತ್ತದೆ. ಮಕ್ಕಳಿಗೆ ಕೇವಲ ಮನರಂಜನೆ ನೀಡುವ ಮೋಜಿನ ಕಥೆಗಳು ಬಹು ಇಷ್ಟವಾಗುತ್ತವೆ. ಮನಸ್ಸಿನ ಬೇಸರ ಕಳೆಯಲು ಇಂತಹವು ನೆರವಾಗುತ್ತವೆ. ಅನೇಕ ವಿಷಯಗಳ ಪ್ರಾಥಮಿಕ ಜ್ಞಾನ ನೀಡಬಲ್ಲ ಜ್ಞಾನಾರ್ಜನೆಯ ಉದ್ದೇಶದಿಂದ ರಾಷ್ಟ್ರನಾಯಕರ ದೇಶಾಭಿಮಾನಿಗಳ, ಕವಿಗಳ ಕಥೆಗಾರರ ಜೀವನದ ಆದರ್ಶಗಳನ್ನು ಮಕ್ಕಳು ಕಲಿಯಬೇಕೆಂದು ಸದಾಶಯ ಇಲ್ಲಿ ಹೆಪ್ಪುಗಟ್ಟಿದೆ.

**ಧೀರ ಚಿಲ್ಲಾಳ** : ಒಂದು ಊರಿನಲ್ಲಿ ಒಬ್ಬ ಕುರುಬನಿದ್ದ. ಅವನ ಹೆಸರು ಬಲ್ಲಾಳ. ಸಾವಿರಾರು ಕುರಿಗಳ ಮಾಲಿಕನಾಗಿದ್ದ ಬಲ್ಲಾಳ ದಿನವೂ ಅವುಗಳನ್ನು ಮೇಯಿಸಲು ಅಡವಿಗೆ ಹೋಗುತ್ತಿದ್ದ. ಬಲ್ಲಾಳನದೂ ಸಹ ಕುರಿಗಳನ್ನು ಕಾಯುವುದೇ ಕೆಲಸವಾಗಿತ್ತು.

"ಬಲ್ಲಾಳ ಮತ್ತು ಚಿಲ್ಲಾಳ ಇಬ್ಬರೂ ಕುರಿ ಕಾಯುವ ಕುರುಬರು. ದಟ್ಟಡವಿಯ ನಡುವೆ ಮರವೊಂದಿತ್ತು. ಬಲ್ಲಾಳ ಮತ್ತು ಚಿಲ್ಲಾಳರಿಗೆ ಬಾಯಾರಿ ಹಸಿವಾಗಿತ್ತು. ತಿಂದುಂಡು ಮರದ ಕೆಳಗೆ ಮಲಗಿದ್ದರು. ಆಗ ಚಿಲ್ಲಾಳನಿಗೆ ಜೇನು ತಿನ್ನುವ ಆಸೆಯಾಯಿತು. ದಾರಿಯ ಮಧ್ಯದಲ್ಲಿದ್ದ ಮರದಲ್ಲಿ ಜೇನು ಬಿಡಿಸಿದನು. ತಿರುಗಿ ಬರುವಾಗ ಕರಡಿ ಅಡ್ಡ ಬಂದಿತು. ಆಗ ಧೈರ್ಯದಿ ಕರಡಿಯ ಕೊಂದು ಹೆಮ್ಮೆಯ ಪುತ್ರನಾದನು.

ಈ ಕಥೆಯಲ್ಲಿ ಉಪಾಯದಿಂದ ಕರಡಿ ಕೊಲ್ಲುವ ಧೀರ ಚಿಲ್ಲಾಳ ಮನುಷ್ಯ, ಮನುಷ್ಯರಲ್ಲಿ ಪ್ರೇಮ, ಪ್ರಾಣಿದಯೆಯಂಥ ಅಪರೂಪದ ಗುಣಗಳ ಖಣಿಯಾಗಿರುವ ಬಾಲಕನ ಧೈರ್ಯ, ಸಾಹಸ, ಮೆಚ್ಚುವಂತಹದ್ದು, ಇಂತಹ ಕಥೆಗಳಿಂದ ಮಕ್ಕಳು ಸಾಹಸ ಕಥೆಯನ್ನು ಓದುವುದರಿಂದ ಧೈರ್ಯ ಸ್ಥೈರ್ಯ, ಸಾಹಸ, ಪ್ರವೃತ್ತಿಗಳನ್ನು ಬೆಳಸಿಕೊಳ್ಳುತ್ತಾರೆ. ಇಲ್ಲಿ ಚಿಲ್ಲಾಳನ ಧೈರ್ಯ ಎಲ್ಲರಿಗೂ ಮಾದರಿ. ಮಕ್ಕಳಿಗೆ ಪ್ರೀಯವಾಗಬಹುದಾದ ಇಂಥ ಸಾಹಸದ ಕಥೆಗಳನ್ನು ಸಂಗಮೇಶ ಗುಜಗೊಂಡರು 'ನೂರು ನಾಣ್ಯ ಮೂರು ಮಾತು" ಕಥೆಗಳಲ್ಲಿ ಹೆಣೆದಿದ್ದಾರೆ.

ಮಾನವೀಯ ಮೌಲ್ಯಗಳು ಮಕ್ಕಳ ಮನಸ್ಸಿಗೆ ಹಿತಮಿತವೆಂಬಂತೆ ತುಂಬುವ ಸರಳ ಆಕರ್ಷಕ ಕಥೆಗಳ ಕೊರತೆಯಿರುವ ಕನ್ನಡ ಸಾಹಿತ್ಯಕ್ಕೆ ವಿಸಿಷ್ಟ ಕಥೆಗಳು ಅವಶ್ಯವೆನಿಸುತ್ತವೆ.

ಸಂಗಮೇಶ ಗುಜಗೊಂಡರ ಕಥೆಗಳಲ್ಲಿ ಹಳ್ಳಿಯ ಚಿತ್ರಣಗಳು ಮುಖ್ಯವಾಗಿ ಕಂಡು ಬರುತ್ತವೆ, ಉತ್ತಮ ಕಥೆಗಳು ಮಕ್ಕಳ ಸ್ಮೃತಿ ಪಟಲದ ಮೆಲೆ ಹರಿದಾಡಿದಾಗ ಅಂಥ ಕಥೆಗಳಿಗೆ ಅದ್ಭುತ ಶಕ್ತಿ ಇದೆ. ಎಂದು ಪರಿಗಣಿಸಬೇಕು. ಇವರ "ನೂರು ನಾಣ್ಯ ಮೂರು ಮಾತು" ಕಥಾ ಸಂಕಲನದಲ್ಲಿ ಪ್ರಕಟವಾದ "ಅಜ್ಜ ಹೇಳಿದ ಮಾತು" ಈ ಕಥೆಯಲ್ಲಿ ಪರರಿಗೆ ಹಿಂಸೆ ಕೊಡುವುದು ಮಹಾಪಾಪ, ಪ್ರಾಣಿ ಪಕ್ಷಿಗಳಿಗೆ ಹಿಂಸೆ ಕೊಡುವುದು ಅಪರಾಧ, ಅಜ್ಜ ಮಕ್ಕಳಿಗೆ ನೀತಿಯ ಮಾತು ಹೇಳಿ ಮಜ್ಜಿಗೆ ಕುಡಿಯಲು ಕೊಟ್ಟಾಗ ಅವನು ಮಜ್ಜಿಗೆಯ ಅಜ್ಜ ಎಂದೆ ಪ್ರಖ್ಯಾತನಾದನು. ಇನ್ನೊಂದು ಕಥೆಯಲ್ಲಿ ಅಂದರೆ "ವಿಚಿತ್ರ ರಾಜ ಅಪರೂಪ ಪಂಡಿತ", ಇಲ್ಲಿ ಚಂದ್ರಧರನೆಂಬ ರಾಜನಿಗೆ ಬರೀ ಹೊಗಳಿಕೆ ಬೇಕಾಗಿತ್ತು. ಪಂಡಿತರನ್ನು, ನೃತ್ಯಗಾರರನ್ನು, ಸನ್ಮಾನಿಸಿ ಕಳಿಸುತ್ತಿದ್ದನು, ಅವರಿಂದ ಹೊಗಳಿಕೆಯ ಮಾತು ಕೇಳಿ ಉಬ್ಬಿ ಹೋಗುತ್ತಿದ್ದನು. ಒಂದು ದಿನ ಅವನ ರಾಜ್ಯಕ್ಕೆ ಕೈಲಾಸಪತಿ ಎಂಬ ವೈದ್ಯ ಪಂಡಿತ ಬಂದ, ಅರಮನೆಗೆ ಬಂದು ರಾಜನ ವಿಚಿತ್ರ ವರ್ತನೆ ಅವನ ಆಡಂಬರದ ಮಾತು ಪಂಡಿತನಿಗೆ ಹಿಡಿಸಲಿಲ್ಲ. ಪಂಡಿತನ ಮಾತು ಕೇಳಿ ರಾಜನಿಗೆ ತನ್ನ ತಪ್ಪಿನ ಅರಿವಾಯಿತು. ಕೈಲಾಸಪತಿ ಪಂಡಿತನಿಗೆ ಶಿರಬಾಗಿ ನಮಿಸಿದನು. ಮಾತಿಗಿಂತ ಕೃತಿ ಮುಖ್ಯ ಎಂಬ ನೀತಿ ಇಲ್ಲಿ ಕಂಡು ಬರುತ್ತದೆ.

**ಇನಾಮು ಪತ್ರ :** ಒಂದು ದಿನ ರಾಜನು ಕಾಡಿಗೆ ವಿಹರಿಸಲು ಹೋದಾಗ ಅವನಿಗೆ ನೀರಡಿಕೆಯಾಯಿತು. ಆಗ ಒಂದು ಮರದ ಕೆಳಗೆ ಈರಗೊಂಡನೆಂಬ ರೈತನು ಅರವಟ್ಟಿಗೆಯಲ್ಲಿ ನೀರನ್ನು ತುಂಬಿಕೊಂಡು ದಾರಿ ಹೋಕರಿಗೆ ನೀರು ಕೊಟ್ಟು ಪುಣ್ಯ ಕಟ್ಟಿಕೊಳ್ಳುತ್ತಿದ್ದನು, ರಾಜನು ಅದೇ ದಾರಿಯಲ್ಲಿ ಬಂದಾಗ ರಾಜನಿಗೆ ಕುಡಿಯಲು ನೀರು ಕೊಟ್ಟನು, ರಾಜ ನೀರು ಕುಡಿದು ದಣಿವಾರಿಸಿಕೊಂಡು ಸಂತೋಷ ಪಟ್ಟನು. ಈರಗೊಂಡನಿಗೆ ಅರಮನೆಗೆ ಬರಲು ಹೇಳಿದನು. ಅವನಿಗೆ 'ಇನಾಮು ಪತ್ರ" ಕೊಟ್ಟು ಕಳಿಸಿದನು.

೨೦೧೧ ರಿಂದ ಈ ಕಥೆ ಕರ್ನಾಟಕ ರಾಜ್ಯದ ಕನ್ನಡ ಐದನೇಯ ತರಗತಿಯ ಪ್ರಥಮ ಭಾಷೆ ಕನ್ನಡ ಪುಸ್ತಕಕ್ಕಾಗಿ ಆಯ್ಕೆಗೊಂಡು ಪ್ರಕಟವಾಗಿದೆ.

ಸಂಗಮೇಶ ಗುಜಗೊಂಡರ ಎರಡನೆಯ ಕಥಾ ಸಂಕಲನ ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು ಇಲ್ಲಿಯ ಕಥೆಗಳು ಮಕ್ಕಳ ಬೌದ್ಧಿಕ ಗ್ರಹಿಕೆಯನ್ನು ವಿಸ್ತಾರಗೊಳಿಸುವಂತಹ ವಾಚನಾಭಿರುಚಿ ಈ ಕಥೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ.

ದೀಪು ಮತ್ತು ಗಾಳಿಪಟ, ಹೋದ ಮಳೆ ಬಂತು, ಬುಲಂದರನ ಸಾಹಸ, ಕಳ್ಳ ಶಿಷ್ಯನಾದ, ರಾಜಕುಮಾರಿಯ ಔದಾರ್ಯ, ಕೆಲಸ ಇದ್ದೇ ಇದೆ, ಭಾಗೀರತಿಯ ಉಪಾಯ, ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು, ದಾರಿಬುತ್ತಿ ನೆತ್ತಿ ಬುತ್ತಿ, ಗೆಳೆತನ, ಶಿವರಾಜ ಮತ್ತು ಸಣ್ಣ ನದಿ, ಭೂಮಿ ಪೂಜೆ.

ಮಕ್ಕಳ ಸೃಜನಶೀಲತೆಯನ್ನು ಪೋಷಿಸಿ ವರ್ಧಿಸುವ ಅವರ ಜ್ಞಾಪಕ, ಕಲ್ಪಕ, ಶಕ್ತಿಯನ್ನು ಹೆಚ್ಚಿಸಿ ಮುದ ನೀಡುವ ಹೊಸ ಬಗೆಯ ಕಥೆಗಳು ಇನಷ್ಟು, ಮತಷ್ಟು, ಬೇಕೆನ್ನುವ ಹಂಬಲದಿಂದ ಸಂಗಮೇಶ ಗುಜಗೊಂಡರು ಮಕ್ಕಳ ಕಥೆಗಳನ್ನು ರಚಿಸಿದ್ದಾರೆ.

ಕಥೆಗಳ ಪ್ರಭಾವದಿಂದ ಮಕ್ಕಳು ಜ್ಞಾನ ಸಂಗ್ರಹಿಸಿ ಕೊಳ್ಳುತ್ತಾರೆ. ಸರ್ವಾಂಗೀಣ ಪ್ರಗತಿ ಹೊಂದಲು ಇಚ್ಛಿಸುತ್ತಾರೆ. ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಜೀವನದ ಆನಂದ ಸಂತೋಷ ಸವಿಯುತ್ತಾರೆ. ವ್ಯಕ್ತಿತ್ವ ವಿಕಸನಗೊಂಡು ಪೂರಕವಾಗಿ ನಡೆಯುತ್ತಾರೆ. ಕ್ಲಿಷ್ಟ ಸನ್ನಿವೇಶಗಳನ್ನು ಯಶಸ್ವಿಯಾಗಿ ನಿಭಾಯಿಸಿ ಪರಿಹಾರ ಕಂಡುಕೊಳ್ಳುತ್ತಾರೆ. ಜೀವನ ಕೌಶಲ್ಯಗಳನ್ನು ಅಳವಡಿಸಿಕೊಳ್ಳುತ್ತಾರೆ. ಉತ್ತಮ ನಾಗರೀಕರಾಗಿ ಹಿರಿಯರ ಆದರ್ಶ ಗುಣಗಳನ್ನು ಪರಿಪಾಲಿಸುತ್ತಾರೆ. ಧರ್ಮ, ಜಾತಿ, ಲಿಂಗ, ವರ್ಣ ಭೇಧ, ನೀತಿಯನ್ನು ದೂರೀಕರಿಸಲು ಪ್ರಕೃತಿ ಪ್ರೀತಿ, ದೇಶಾಭಿಮಾನ, ಭಾವೈಕ್ಯತೆ, ಬೆಳೆಸಿಕೊಳ್ಳಲು ಮುಖಂಡತ್ವ ಗುಣ ಹೊಂದಲು ಸಂಗಮೇಶ ಗುಜಗೊಂಡರ ಕಥೆಗಳು ಮಕ್ಕಳ ಮನಸ್ಸಿನ ಮೇಲೆ ಪ್ರಭಾವ ಬೀರುವಲ್ಲಿ ಯಶಸ್ವಿಯಾಗಿವೆ.

**ದೀಪು ಮತ್ತು ಗಾಳಿ ಪಟ :** ಕಳೆದ ದಸರೆಯ ರಜೆಯಲ್ಲಿ ದೀಪು ಅಜ್ಜನ ಊರಿಗೆ ಬಂದಿದ್ದ. ಹಳ್ಳಿ ಅಂದರೆ ದೀಪುಗೆ ತುಂಬಾ ಪ್ರೀತಿ. ಅವಸರ ಇಲ್ಲದ ಹಳ್ಳಿಯ ಜೀವನ,

ನೂಕುನುಗ್ಗಾಟವಿಲ್ಲದ ಜನರ ಓಡಾಟ, ಮಿಗಿಲಾಗಿ ಕಣ್ಣು, ಗಂಟಲು, ಮೂಗು, ಉರಿಸುವ ವಾಹನಗಳ ಹೊಗೆಯಿಲ್ಲದ ನಿರ್ಮಲ ವಾತಾವರಣ ಕಿರ್ ಕಿರ್ ಎನ್ನುವ ವಾಹನಗಳ ಶಬ್ದವಿಲ್ಲದ ಶಾಂತವಾದ ಸ್ಥಿತಿಯಲ್ಲಿರುವ ಹಳ್ಳಿಯ ಪರಿಸರ ಯಾರಿಗಾದರೂ ಅಚ್ಚು ಮೆಚ್ಚಲ್ಲವೇ? ಸಂಗಮೇಶ ಗುಜಗೊಂಡರು ಇಲ್ಲಿಯ ಕಥೆಯಲ್ಲಿ ಹಳ್ಳಿಯ ಸುಂದರ ವಾತಾವರಣ ಪರಿಸರದ ಕುರಿತು ಹಳ್ಳಿಯ ಚಿತ್ರಣ ಸೊಗಸಾಗಿ ನಿರೂಪಿಸಿದ್ದಾರೆ.

ಹೊಲದ ತುಂಬಾ ಹಸಿರು ಗಿಡಗಳು ಬೆಳೆದು ನಿಂತಿವೆ. ಬನದ ತುಂಬ ಚಿಲಿಪಿಲಿ ಗುಟ್ಟುವ ಹಕ್ಕಿಗಳಿವೆ. ಕೊರಳ ಗೆಜ್ಜೆ ಗಿಲ್ ಗಿಲ್ ಎನ್ನುವ ದನ ಕರುಗಳು ಇವೆ. ಹಳ್ಳಿಯ ಪಕ್ಕದಿ ಜುಳು ಜುಳು ಹರಿಯುವ ಹಳ್ಳಕೊಳ್ಳಗಳು ಇವೆ. ಹೀಗೆ ಈ ಕಥೆಯಲ್ಲಿ ಪರಿಸರದ ವರ್ಣನೆಯಿದೆ. ಹಳ್ಳಿಯ ಆಟಗಳು ಎಂದರೆ ಮಕ್ಕಳಿಗೆ ಎಲ್ಲಿಲ್ಲದ ಸಂತೋಷ. ದೀಪು ಮಾಡಿದನು ಗಾಳಿಪಟ, ಬಣ್ಣ ಬಣ್ಣದ ಗಾಳಿಪಟ. ಗಗನದಿ ಹಾರುವ ಗಾಳಿಪಟ, ಗಾಳಿಪಟ ಎಂದರೆ ದೀಪುಗೆ ಬಲು ಇಷ್ಟ. ದೀಪು ಅಜ್ಜಿ ಕಡೆಯಿಂದ ದಾರ, ಅಂಟು ಕಡ್ಡಿ ಎಲ್ಲವನ್ನು ಪಡೆದು ಗೆಳೆಯ ಬಸವರಾಜನಿಂದ ಬಣ್ಣದ ಗಾಳಿಪಟ ಮಾಡಿಸಿ ಬಿಟ್ಟನು. ಸಂಗಮೇಶ ಗುಜಗೊಂಡರ ಕಥೆಯ ಬರಹ ಬಲು ಸುಂದರ. ಅವರ ಕಥೆಗಳಲ್ಲಿ ಕಾವ್ಯ ಅಡಗಿರುವುದು ಚಿಂತನೆಗೆ ಹಚ್ಚುವ ವಿಚಾರಗಳು, ಅವರ ಭಾಷಾ ಶೈಲಿ ಹಾಗೂ ಹಳ್ಳಿಯ ಪರಿಸರ, ಮಕ್ಕಳ ಮನ ತಣಿಸುವ ಆಟಗಳು ಸ್ವಾರಸ್ಯವಾಗಿ ಮೂಡಿ ಬಂದಿದೆ. ಗೆಳೆಯರ ಗೆಳೆಯ ಸಿದ್ದನು ಹರಿದಿದ್ದನು ದೀಪುವಿನ ಗಾಳಿ ಪಟ. ಶಂಕರ ಬಸು, ಜಗ್ಗ, ಬಂದರು ಮನೆಯ ಮಾಳಿಗೆ ಎರಿದರು ಹಾರಿಸಿದರು ಎತ್ತರಕೆ ಗಾಳಿ ಪಟವನ್ನು ಹಾರಲಿಲ್ಲ ಸಿದ್ದನ ಗಾಳಿಪಟ, ಸಿದ್ದ ಕೋಪಗೊಂಡನು ದೀಪು ಕೊಟ್ಟನು ತನ್ನಯ ಗಾಳಿ ಪಟ.

"ಈ ಕಥೆಯಲ್ಲಿ ಸಿದ್ದನು ದೀಪುವಿನ ಗಾಳಿಪಟವನ್ನು ಕತ್ತರಿಸಿದನು. ಮರುದಿನ ಎಲ್ಲರೂ ಗಾಳಿಪಟವನ್ನು ಹಾರಿಸಲು ಮನೆಯ ಮಾಳಿಗೆ ಏರಿದರು. ಆಗ ಸಿದ್ದನ ಗಾಳಿಪಟ ಹಾರಲಿಲ್ಲ. ಸಿದ್ದನ ಸಪ್ಪೆ ಮುಖ ನೋಡಿ, ದೀಪು ಪ್ರೀತಿಯಿಂದ ಕರೆದು ತನ್ನ ಗಾಳಿಪಟ ಕೊಟ್ಟನು. ದೀಪುವಿನ ಹತ್ತಿರ ಸಿದ್ದನು ಕ್ಷಮೆ ಕೇಳಿದನು. ತಪ್ಪನ್ನು ಒಪ್ಪಿಕೊಂಡ ಮೇಲೆ ಕ್ಷಮೆ ಯಾಕೆ, ಸಿದ್ದನ ಮನ ಪರಿವರ್ತನೆ ಮಾಡಿ ದೀಪು ತನ್ನ ಜಾಣ್ಮೆ ಮೆರೆದು ಎಲ್ಲರಿಂದ ಬೇಷ್ ಎನಿಸಿಕೊಕಂಡನು. ಇದರಲ್ಲಿ ಕ್ಷಮೆ, ಔದಾರ್ಯ, ಸ್ನೇಹಾರ್ಥತೆ ತುಂಬಿದೆ.

**ಹೋದ ಮಳೆ ಬಂತು:** ಹಳ್ಳಿಯಲ್ಲಿ ಶಾಂತಿಯುತ ವಾತಾವರಣ, ಅಲ್ಲಿ ಗಲಿಬಿಲಿ ಇಲ್ಲ. ಪಟ್ಟಣದಲ್ಲಿ ಬರಿ ಬೊಬ್ಬೆ ಬೊಬ್ಬೆ. ಅಲ್ಲಿ ಶಾಂತಿಯೇ ಇಲ್ಲ. ಪುರಜನರ ದಾಸ್ಯತನ ಹಳ್ಳಿಯವರಿಗಿಲ್ಲ. ತನ್ನ ಕೆಲಸವನ್ನೆಲ್ಲಾ ಮಾಡಿ ತಾನು ದುಡಿಯುವವನು ಹಳ್ಳಿಯ ಜನರ ಪಾಲಿಗೆ ಅರಣ್ಯವೇ ಸರ್ವಸ್ವವಾಗಿತ್ತು. ಬಡಿಸಲು ಹಾಕಲು ಉರುವಲು, ಕಟ್ಟಿಗೆಯನ್ನು ಜನರು ಅಲ್ಲಿಂದಲೇ ತರುತ್ತಿದ್ದರು. ದನ ಕರುಗಳಿಗೆ ಮೇವು ಅರಣ್ಯದಲ್ಲಿ ವಿಫುಲವಾಗಿ ಸಿಗುತ್ತಿತ್ತು. ಕೆಲವರು ಬೇಟೆಯಾಡಿ ಮಾಂಸ ಪಡೆಯುತ್ತಿದ್ದರು. ಮತ್ತೆ ಕೆಲವರು ಹಣ್ಣು

ಹಂಪಲುಗಳನ್ನು ಸಂಗ್ರಹಿಸಿ ತರುತ್ತಿದ್ದರು. ಅಂಟು, ಸತ್ತ ಪ್ರಾಣಿಗಳ ಚರ್ಮ, ಪಕ್ಷಿಗಳ ಅಂದವಾದ ಗರಿಗಳು, ದಂತಗಳು, ಮುಂತಾದವುಗಳನ್ನು ಜನರು ಕಲೆಹಾಕಿ ಮಾರುತ್ತಿದ್ದರು, ಹೀಗೆ ಹಳ್ಳಿಗರಿಗೆ ಅರಣ್ಯವೇ ಜೀವ ನಾಡಿಯಾಗಿತ್ತು.

೨೦೧೩ರಲ್ಲಿ ಮಹಾರಾಷ್ಟ್ರ ರಾಜ್ಯದ ಕನ್ನಡ ಮೂರನೇಯ ಇಯತ್ತೆಯ 'ಬಾಲಭಾರತಿ' ಪುಸ್ತಕದಲ್ಲಿ ಪ್ರಕಟಗೊಂಡಿದೆ.

ಅನೇಕ ವರ್ಷಗಳು ಉರುಳಿದವು. ಜನರ ದಾಹಕ್ಕೆ ಸಿಕ್ಕು ಹಳ್ಳಿಯ ಸುತ್ತಲಿನ ಅರಣ್ಯವೆಲ್ಲಾ ಅಳಿದು ಹೋಯ್ತು. ಅರಣ್ಯದಲ್ಲಿ ವಾಸವಾಗಿದ್ದ ಖಗಮೃಗಗಳು ದಿಕ್ಕುಗಾಣದೆ ಓಡಿ ಹೋದವು. ಬೆಟ್ಟಗಳೆಲ್ಲಾ ಬೋಳಾಗಿ ಇಳಿಜಾರುಗಳೆಲ್ಲಾ ಹೊಲಗದ್ದೆಗಳಾದವು, ಮುಂದೆ ಮಳೆ ಕಡಿಮೆಯಾಯಿತು, ಜನರು ಅರಿಯದೆ ಕಾಡನ್ನು ಕಡಿದರು, ಅದರಿಂದ ಪರಿಸರ ಕೆಟ್ಟು ಹೋಯಿತು. ಪರಿಸರ ಇಲ್ಲವಾದ ಮೇಲೆ ಬೆಳೆಯೂ ಹೋಯಿತು. ಮಳೆಯೂ ಹೋಯಿತು. ಗಾಳಿಯಲ್ಲಿ ಬಿಸಿಲಿನ ತಾಪ ಹೆಚ್ಚಾಯಿತು.

ಸಂಗಮೇಶ ಗುಜಗೊಂಡರು ಪರಿಸರ ಹಾನಿಯಿಂದಾದ ಅನಾಹುತಗಳ ಕುರಿತು ಪರಿಣಾಮಕಾರಿಯಾದಂತಹ ಕಥೆಯನ್ನು ಬರೆದಿದ್ದಾರೆ. ಮಾನವರು ಅರಿತೋ ಅಥವಾ ಅರಿಯದೆ ಕಾಡನ್ನು ಕಡಿದರು. ತಮ್ಮ ಸ್ವಾರ್ಥಕ್ಕಾಗಿ ಕಾಡನ್ನು ಕಡಿದದ್ದು ನ್ಯಾಯವೇ? ಜನರಲ್ಲಿ ಅರಿವಿನ ಪರಿಯನು ತುಂಬುತ್ತ ಮೂಢ ನಂಬಿಕೆಯನ್ನು ಹೋಗಲಾಡಿಸುತ್ತ ಶಿಕ್ಷಣ, ಸಂಸ್ಕಾರ, ನೀಡುವುದರೊಂದಿಗೆ ನೀತಿಯ ದಾರಿಯನು ತೋರುತ್ತ ಮನುಷ್ಯನಿಗೆ ಸಂಸ್ಕಾರ ದೊರೆಯಬೇಕಾದರೆ ಅವನಿಗೆ ಶಿಕ್ಷಣವು ಅವಶ್ಯವಾಗಿ ಬೇಕು.

ಆಗೊಬ್ಬ ಹಳ್ಳಿಯ ಮುದುಕ ಹೇಳಿದ ಆ ಕಡೆ ದೂರದ ಸೀಮೆಯ ಜನರು ಮಳೆ ಭಾರದಿದ್ದಾಗ ಗ್ರಾಮ ದೇವತೆಗೆ ಕುರಿ, ಕೋಣ ಬಲಿ ಕೊಡುತ್ತಾರೆ. ನಾನಿದನ್ನು ಕೇಳಿದ್ದೇನೆ ಎಂದ. 'ನಾವು ಹಾಗೇ ಮಾಡೋಣ'. ಹಳ್ಳಿಗರು ಒಕ್ಕೊರಲಿನಿಂದ ಅಂದರು, ಊರ ಮುಖಂಡರೆಲ್ಲಾ ಸೇರಿ ಗ್ರಾಮ ದೇವತೆಯ ಉತ್ಸವ ಏರ್ಪಡಿಸಿದರು. ಅಂದು ಉತ್ಸವದ ದಿನ ಜನರೆಲ್ಲಾ ವಿಜ್ರಂಭಣೆಯಿಂದ ಕುರಿ ಕೋಣಗಳನ್ನು ಪೂಜೆ ಮಾಡಿದರು, ಅವುಗಳನ್ನು ಮೆರವಣಿಗೆ ಮಾಡುತ್ತ ಕುಣಿಯುತ್ತ ಗ್ರಾಮ ದೇವತೆಯ ಗುಡಿಯ ಕಡೆಗೆ ನಡೆದರು, ಅದೇ ಸಂದರ್ಬದಲ್ಲಿ ಪಕ್ಷಿ ತಜ್ಞರಿಬ್ಬರು ಆ ಹಳ್ಳಿಗೆ ಬಂದರು. ಅದನ್ನು ಕಣ್ಣಾರೆ ಕಂಡು ಜನರನ್ನು ಕೇಳಿದರು. ಗ್ರಾಮದೇವತೆಗೆ ಕುರಿ, ಕೋಳಿ, ಬಲಿಕೊಟ್ಟರೆ ಮಳೆ ಬರುತ್ತದೆ ಅಂತಾ ದೊಡ್ಡವರು ಹೇಳಿದ್ದಾರೆ ಎಂದಾಗ; ನೋಡಿ ನಿಮ್ಮ ತಪ್ಪಿಗೆ ಪ್ರಾಣಿಗಳನ್ನೇಕೆ ಬಲಿ ಕೊಡುತ್ತೀರಿ. ನೀವು ಅರಣ್ಯ ನಾಶ ಮಾಡಿದರೆ ಮುಂದೊಂದು ದಿನ ಕ್ಷಾಮದಿಂದ ನೀವು ನರಳಿ ಸಾಯುತ್ತೀರಿ. ಎಂದು ಎಚ್ಚರಿಕೆ ನೀಡಿದರು. ಆ ಊರಿನ ಜನ ಮೂಢನಂಬಿಕೆ ತೊರೆದು ಬಲಿ ನಿಲ್ಲಿಸಿ, ಗಿಡಮರಗಳನ್ನು ಬೆಳೆಸಲು ಪ್ರಾರಂಭಿಸಿದರು, ಆಗ ಊರಿನಲ್ಲಿ ಮಳೆ ಬರಲು ಪ್ರಾರಂಭಿಸಿತು. 'ಬಯಲ ಭಾನಿನಲ್ಲಿ ಕಪ್ಪು ಮೋಡಗಳು ಸುತ್ತಲು ಮುತ್ತಲು

ಮುತ್ತಿಕೊಂಡವು. ಭೂಮಿಯ ಕಡೆಗೆ ರಪ... ರಪ... ಮಳೆಯ ಹನಿಗಳು ಉದುರಿದವು. ಕೆರೆ ಹಳ್ಳ ಕೊಳ್ಳಗಳು ತುಂಬಿಕೊಂಡವು, ಜುಳು ಜುಳು ನೀರು ಹರಿಯಿತು. ಒಣಗಿದ ಗಿಡ ಮರಗಳು ಚಿಗುರಿದವು.

ಈ ಕಥೆಯಲ್ಲಿ ಜನರ ಮೂಢನಂಬಿಕೆ ತೊರೆದು ಹಳ್ಳಿಯ ಪರಿಸರ ಸುಂದರವಾಗಿ ಕಾಣಲು ಎಚ್ಚೆತ್ತ ಜನ ಸಸಿಗಳನ್ನು ನೆಟ್ಟು ಪೋಷಿಸಿ ಬೆಳೆಸಿದರು. ಅಲ್ಲಿ ಮಳೆ ಚೆನ್ನಾಗಿ ಸುರಿಯಿತು. ಅಲ್ಪ ಸ್ವಲ್ಪ ಜಮೀನಿನಲ್ಲಿಯೇ ಚೆನ್ನಾಗಿ ಬೆಳೆ ಬೆಳದುಕೊಂಡು ಅಲ್ಲಿಯ ಜನ ಸುಖವಾಗಿ ಇರಲಾರಂಬಿಸಿದರು.

ಇಂದಿನ ಜಗತ್ತು ಹಿಂದಿನ ಜಗತ್ತಿನಂತಿಲ್ಲ, ಇಂದಿನ ಮಕ್ಕಳು ಹಿಂದಿನ ಮಕ್ಕಳಂತಲ್ಲ, ಮಕ್ಕಳಿಗೆ ಬೇಕಾಗಿರುವ ವಿದ್ಯೆಯ ಸ್ವರೂಪ ಇಂದಿನ ವೈಜ್ಞಾನಿಕ ನಾಗರೀಕ ಜೀವನಕ್ಕೆ ಹೊಂದಿಕೊಳ್ಳುವ ಪ್ರಕ್ರಿಯೆಗೆ ಅವಶ್ಯವಾಗುವ ಲಕ್ಷಣದಿಂದ ಕೂಡಿರಬೇಕು. ಹೀಗಾಗಿ ಇಂದಿನ ಮಕ್ಕಳಿಗೆ ಅದೇ ಹಳೆಯ ಕಥೆಗಳನ್ನು ಹೇಳಲು ಹೋದರೆ ರುಚಿಸದೇ ಇರಬಹುದು. ಸಾಹಸದ ಕಥೆಗಳಿಗೆ ನೈಜತೆಯ ಮೆರಗು ಕೊಟ್ಟಾಗ ಮಕ್ಕಳಿಗೆ ಕುತುಹಲ ಮೂಡುತ್ತದೆ. ಕಥೆಯಲ್ಲಿನ ಹಿರೋ ಜೊತೆ ಅವರೂ ಕಾಲ್ಪನಿಕ ಪ್ರಯಾಣ ಹೊರಡುತ್ತಾರೆ. ಗುದ್ದಾಡುತ್ತಾರೆ. ಬೇರೆ ಬೇರೆ ಸ್ಥಳಗಳನ್ನು ಸುತ್ತುತ್ತಾರೆ. ಗ್ರಹ ತಾರೆಗಳಿಗೆ ಕೈ ಚಾಚಿ ಅನ್ಯ ಗ್ರಹಗಳಿಗೂ ದಾಂಗುಡಿ ಇಡುವ ತಮ್ಮ ಹೀರೋನೊಂದಿಗೆ ವಿಜಯಿಯಾಗಿ ಮರಳುತ್ತಾರೆ. ಕಥೆಗೆ ಕಾಲಿಲ್ಲವೆಂದರೂ ನಮ್ಮ ತಲೆಗೆ, ಕಲ್ಪನೆಗೆ, ಅಗಣಿತ ಪಾದಗಳೂ ರೆಕ್ಕೆಗಳು ಯಥೇಚ್ಛವಾಗಿವೆ. ಅದರಲ್ಲೂ ಮಾರ್ಕ ಟ್ವೇನನ ಟಾಂ ಸಾಯರನ ಸಾಹಸಗಳು, ಹಕಲ್ ಬರೀಫನ ಸಾಹಸಗಳು ನ್ಯಾನ್ಸಿ ಡ್ರ್ಯೂ ಮೊದಲಾದ ಕಥೆಗಳು ಮಕ್ಕಳಲ್ಲಿ ಕುತುಹಲ ಕೆರಳಿಸಿ ಅವರನ್ನು ಸಾಹಸ ಯಾತ್ರೆಗೆ ಕರೆದೊಯ್ದು ರಂಜಿಸುವ ವಿಶ್ವ ವಿಖ್ಯಾತ ಕಥೆಗಳಾಗಿವೆ. ಅಂತಹ ಮಕ್ಕಳ ಸಾಹಿತ್ಯದ ಕಥೆಗಾರರ ಸಂಖ್ಯೆ ಕನ್ನಡದಲ್ಲಿ ಎಷ್ಟು ಇವೆ. ಅಂತಹ ಬರಹಗಾರರು ಎಲ್ಲಿದ್ದಾರೆ? ಒಂದಿಷ್ಟು ಏನಾದರೂ ಮಾಡೋಣ ಎಂಬ ಹಂಬಲದಿಂದ ಅಲ್ಲಲ್ಲಿ ಮಕ್ಕಳ ಸಾಹಿತ್ಯ ಕೃತಿಗಳನ್ನು ಪ್ರಕಟಣೆ ಮಾಡುತ್ತಲೇ ಬಂದಿದ್ದಾರೆ. ಒಳಗಿನ ತುಡಿತ ಮಕ್ಕಳ ಸಾಹಿತ್ಯದ ದಾಖಲೀಕರಣ ಎಂಬ ಸೇವೆಯನ್ನು ಪ್ರಾಂಜಲವಾಗಿ ಮಾಡುವ ಕೆಲವರು ಅಲ್ಲಲ್ಲಿ ಇದ್ದಾರೆ ಪಂಜೆ ಮಂಗೇಶರಾಯರು ಕುವೆಂಪು, ಜಿ.ಪಿ ರಾಜರತ್ನಂ, ಹೊಯ್ಸಳ, ದಿನಕರ ದೇಸಾಯಿ, ಸಿ.ಸು ಸಂಗಮೇಶ, ಕಂಚ್ಯಾಣಿ ಶರಣಪ್ಪ ಮೊದಲಾದವರು ಮಕ್ಕಳಿಗಾಗಿ ಕಥೆಗಳು ಹಾಗೂ ನಾಟಕಗಳನ್ನು ರಚಿಸಿದ್ದು ಮಕ್ಕಳ ಮೇಲಿನ ಅವರ ಕಳಕಳಿಗೆ ಸಾಕ್ಷಿಯಾಗಿದ್ದರೆ, ಮಕ್ಕಳ ನಾಲಿಗೆ ಮೇಲೆ ಅವು ನಲಿದಾಡುತ್ತಿರುವುದು ಹೆಮ್ಮೆಯ ವಿಷಯ, ಇಂತಹವರ ಸಾಲಿನಲ್ಲಿ ಸಂಗಮೇಶ ಗುಜಗೊಂಡರು ಒಬ್ಬರು.

**ಸಮಾರೋಪ:** ಸಂಗಮೇಶ ಗುಜಗೊಂಡರ ಎಲ್ಲ ಕಥೆಗಳೂ ಎಲ್ಲೂ ನಿಲ್ಲದೆ ಓದಿಸಿಕೊಂಡು ಹೋಗುತ್ತವೆ. ಸಣ್ಣ ಸಣ್ಣ ವಾಕ್ಯಗಳು ಸಂದರ್ಭಕ್ಕೆ ತಕ್ಕ ಪಡೆ ನುಡುಗಳು, ಜೋಡು

ನುಡಿಗಳು, ಕತೆಗಾರಿಕೆಯ ಅಗ್ಗಳಿಕೆಗೆ ಸಾಕ್ಷಿಯಾಗಿವೆ. ಅಲ್ಲಲ್ಲಿ ಕತೆಗಳಿಗಿಂತ ವಿವರಣೆ ಜಾಸ್ತಿ ಎನಿಸಿದರೂ ರುಚಿಕಟ್ಟಾಗಿರುವುದರಿಂದ ಸಹ್ಯವಾಗುತ್ತದೆ. ಮೈನವಿರೆಬ್ಬಿಸುವ ಸಾಹಸದ ವರ್ಣನೆ, ವೈಜ್ಞಾನಿಕ ದೃಷ್ಟಿಕೋನದ ಅಗತ್ಯ, ಮೂಢನಂಬಿಕೆಗಳ ನಿರ್ಮೂಲನ, ಇಂತಹ ವಸ್ತುಗಳನಾಯ್ದುಕೊಂಡು ಕತೆ ಹೆಣೆಯುವ ಅಗತ್ಯ ಇಂದು ಹೆಚ್ಚಾಗಿರುವುದರಿಂದ ಸಂಗಮೇಶ ಗುಜಗೊಂಡರು ಸೂತ್ರ ರೂಪಿ ಸಾಂಪ್ರದಾಯ ಬದ್ಧ ಕಥಾ ಪ್ರವಾಹದಿಂದ ಹೊರಬಂದು ಕತೆ ಹೇಳಬಲ್ಲವರಾದರೆ ಇವರೊಬ್ಬ ಭರವಸೆಯ ಮಕ್ಕಳ ಕತೆಗಾರರಾಗುತ್ತಾರೆ ಎಂದು ಖಂಡಿತವಾಗಿಯೂ ಹೇಳಬಹುದು.

ಸಂಗಮೇಶ ಗುಜಗೊಂಡರ ಕಥೆಯಲ್ಲಿಯ ನಿರೂಪಣೆಯನ್ನು ಇಷ್ಟ ಪಡುವಂತಹದ್ದು, ಕಥೆಗಳ ಚಿತ್ರಣ ಮಕ್ಕಳ ಮನಸೂರೆಗೊಳ್ಳುವಂತೆ ಮಾಡಿದ್ದಾರೆ. ಗುಜಗೊಂಡರ ಇಂತಹ ಸಾಹಸಮಯ ಪ್ರಯೋಗಗಳು ಕಥಾ ಲೋಕಕ್ಕೆ ನಿದರ್ಶನವಾಗಿವೆ. ಇದೊಂದು ವಿಶಿಷ್ಟ ಕಾರ್ಯವೆಂದೇ ಹೇಳಬೇಕಾಗುತ್ತದೆ. 'ಜೀವ ಪ್ರೀತಿಯನ್ನು ಧ್ರವ್ಯವಾಗಿಸಿಕೊಕಂಡ ಬಹುತೇಕ ಕಥೆಗಳು ಬದುಕಿನ ಸೌಂದರ್ಯತೆಯನ್ನು ತೋರಿಸುತ್ತವೆ. ಮಕ್ಕಳಿಗೆ ಇಂತಹ ಕಥೆಗಳು ಅವರ ಉತ್ತಮ ಬದುಕಿಗೆ ಭೂಮಿಕೆಯಾಗಬಲ್ಲವು ಎಂದು ಹೇಳಬಹುದು.

**ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು :**

**ಬುಲಂದರನ ಸಾಹಸ:** "ಬುಲಂದರ ಒಬ್ಬ ಸಾಹಸಿ ಯುವಕ ಅವನು ಟೆಂಗಿನ ಜುಟ್ಟುಗಳನ್ನು ಕರಟಗಳನ್ನು ತನ್ನ ಹಡಗಿನ ಮೂಲಕ ಸಾಗಿಸುತ್ತಿದ್ದ. ಒಂದು ದಿನ ದೂರದಲ್ಲಿ ಒಂದು ದ್ವೀಪ ಕಾಣಿಸಿತು. ಅಲ್ಲಿ ವಿಶ್ರಾಂತಿ ಪಡೆದುಕೊಂಡು ಹೋಗೋಣವೆಂದು ತನ್ನ ಹಡಗನ್ನು ಅತ್ತ ತಿರುಗಿಸಿದನು. ಅಲ್ಲಿ ಬೇಸ್ತರು ಮೀನುಗಳನ್ನು ಹಿಡಿಯುತ್ತ ತಮ್ಮ ದೋಣಿಗಳಲ್ಲಿ ಕುಳಿತಿದ್ದರು. ಕೆಲವೇ ಕ್ಷಣಗಳಲ್ಲಿ ಸಮುದ್ರದಲ್ಲಿ ಅಲೆಗಳು ಎತ್ತರ ಎತ್ತರಕ್ಕೆ ಅಪ್ಪಳಿಸತೊಡಗಿದವು. ದೋಣಿಗಳೆಲ್ಲವೂ ಮುಳುಗಲಾರಂಬಿಸಿದವು. ಬುಲಂದರನು ಅವರಿಗೆ ಒಂದು ಜಾಳಿಗೆಯನ್ನು ಬೀಸಿ ಒಗೆದನು. ಅವರು ಆ ಜಾಳಿಗೆಯಲ್ಲಿ ತೇಲುತ್ತ ಮುಂದಿನ ದ್ವೀಪ ತಲುಪಿದರು, ಬುಲಂದರನು ಜಾಳಿಗೆಯ ಸಹಾಯದಿಂದ ಅವರು ಇದ್ದ ದ್ವೀಪವನ್ನು ತಲುಪಿದನು. ಅವನ ಉಪಕಾರಕ್ಕೆ ಎಲ್ಲರೂ ತಲೆ ಬಾಗಿದರು. ಈ ವಿಷಯ ತಿಳಿದ ಸ್ನೇಹನಿಧಿ ರಾಜನು ಅವನ ರಾಜ್ಯಕ್ಕೆ ಕರೆಯಿಸಿ ಅವನಿಗೆ ಗೌರವಿಸಿದನು. ಅವನ ರಾಜ್ಯಕ್ಕೆ ಮುಂದಿನ ಅರಸನಾಗಿ ನೇಮಿಸಿದನು. ಬುಲಂದರನ ಸಾಹಸ ಉಪಕಾರಕ್ಕೆ ದೊರೆತ ಪ್ರತಿಫಲವಿದು.

**ಕಳ್ಳ ಶಿಷ್ಯನಾದ:** ಒಂದು ದಿನ ಮದ್ಯ ರಾತ್ರಿ ಸಮಯ ಕಳ್ಳನೊಬ್ಬ ಶ್ರೀಮಂತರ ಮನೆಗೆ ಹೊಕ್ಕು ಬೆಳ್ಳಿ ಬಂಗಾರ, ವಸ್ತ್ರ, ವಡವೆ ಒಂದೆಡೆ ಕೂಡಿ ಹಾಕಿದ್ದನು. ಅಷ್ಟರಲ್ಲಿ ಮಳೆ ಬಂತು, ಜೋರಾದ ಮಳೆಗೆ ನೀರು ಮನೆಯ ಒಳಗೆ ನುಗ್ಗಿತು. ಮನೆಯವರೆಲ್ಲರೂ ಎಚ್ಚರಾದರು,

ಕತ್ತಲಾದ್ದರಿಂದ ದೀಪ ಹಚ್ಚಿ ಮನೆಯ ತುಂಬ ನೋಡಲಾರಂಬಿಸಿದರು. ಅಷ್ಟರಲ್ಲಿ ಕಳ್ಳ ಗಾಬರಿಗೊಂಡು ಹಿತ್ತಲ ಬಾಗಿಲಿನಿಂದ ಓಡಿ ಹೋದನು. ಇದನ್ನು ಶ್ರೀಮಂತರು ನೋಡಿದರು. ಕಳ್ಳ ಓಡಿ ಓಡಿ ಒಂದು ಮಠವನ್ನು ಸೇರಿದನು. ಸ್ವಾಮಿಗಳು ಅವನನ್ನು ಕಂಡು ಏ ಕಳ್ಳ ನಡೆ ಇಲ್ಲಿಂದ ಎಂದು ಬೆದರಿಸಿದರು. ಆಗ ಕಳ್ಳನು ಗುರುಗಳೇ ನನ್ನನ್ನು ಕಾಪಾಡಿ ಎಂದು ನಡೆದದ್ದೆಲ್ಲವನ್ನು ಹೇಳಿದನು, ಅವನ ಮುಖವನ್ನು ನೋಡಿ ಸ್ವಾಮಿಗಳು ಅವನಿಗೆ ಮಠದಲ್ಲಿ ಉಳಿದುಕೊಳ್ಳಲು ಹೇಳಿದರು, ಮರು ದಿನ ಮಠಕ್ಕೆ ಶ್ರೀಮಂತರು ಬಂದರು ಸ್ವಾಮಿಗಳು ಇದ್ದ ವಿಷಯವನ್ನೆಲ್ಲಾ ಹೇಳಿದರು, ಶ್ರೀಮಂತರು ಕಳ್ಳನನ್ನು ಕ್ಷಮಿಸಿ ಹೊರಟು ಹೋದರು. ಸ್ವಾಮಿಗಳ ಆಶೀರ್ವಾದದಿಂದ ನಾನು ಬದುಕುಳಿದೆ. ಎಂದು ಕಳ್ಳ ಪ್ರತಿವರ್ಷ ಅವರ ಮಠಕ್ಕೆ ಬಂದು ಆಶೀರ್ವಾದ ಪಡೆಯ ಹತ್ತಿದನು. ಮನ ಪರಿವರ್ತನೆಗೊಂಡು ಕಳ್ಳನೊಬ್ಬ ಶಿಷ್ಯನಾಗಿ ಉತ್ತಮ ಬದುಕನ್ನು ಸಾಗಿಸಿದನು. ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು ಈ ಕಥಾ ಸಂಕಲನದಲ್ಲಿ ಬರುವ ಇನ್ನುಳಿದ ಕಥೆಗಳಾದ ರಾಜಕುಮಾರಿಯ ಔದಾರ್ಯ ಕೆಲಸ ಇದ್ದೆ ಇದೆ, ಭಾಗೀರಥಿಯ ಉಪಾಯ, ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು, ದಾರಿಬುತ್ತಿ ನೆತ್ತಿ ಬುತ್ತಿ, ಗೆಳೆತನ, ಶಿವರಾಜ ಮತ್ತು ಸಣ್ಣ ನದಿ ಭೂಮಿ ಪೂಜೆ, ಇವೆಲ್ಲ ಕಥೆಗಳು ಮಕ್ಕಳಿಗೆ ಮುದ ನೀಡುವ ಹೊಸ ಬಗೆಯ ಕಥೆಗಳಾಗಿವೆ. ಮಕ್ಕಳ ಮಾನಸಿಕ ಮತ್ತು ಬೌದ್ಧಿಕ ವಿಕಾಸವನ್ನು ವೃದ್ಧಿಸುವಂತಹ ಕಥೆಗಳು ಈ ಸಂಕಲನದಲ್ಲಿವೆ.

**ಜೀವನ ಚರಿತ್ರೆ :**

"ಬೆಳಕು ಬೀರಲು ಒಂದು ಸಣ್ಣ
ದೀಪವೇ ಸಾಕು, ಅದು ಸಾವಿರಾರು
ದೀಪವನ್ನು ಉರಿಸಿ, ಬೆಳಕನ್ನು
ಹೆಚ್ಚು ಪ್ರಕಾಶಮಾನವಾಗುವಂತೆ
ಮಾಡಬಲ್ಲದು. ನಾವು ಆ ದೀಪಗಳಾಗೋಣ
ಅಲ್ಲಿ ತಾನುರಿಸು ಜಗಕ್ಕೆ ಜ್ಯೋತಿಯನ್ನು ಕೊಡುವ
ಹಣತೆಯ ನಿಸ್ವಾರ್ಥತತೆಯ ಪಾಠ
ನಾವು ಕಲಿಯಬೇಕಾಗಿದೆ."

ಮಾಹಿತಿ ತಂತ್ರಜ್ಞಾನದ ಈ ಕಾಲಘಟ್ಟದಲ್ಲಿ ಮಕ್ಕಳಲ್ಲಿ ಸಾಹಿತ್ಯಾಸಕ್ತಿ ಮೂಡಿಸಿ ಸೃಜನಶೀಲತೆಗೆ ಹೆಚ್ಚು ಒತ್ತು ನೀಡಬೇಕಾಗಿರುವುದು ನಮ್ಮೆಲ್ಲರ ಬಹುದೊಡ್ಡ ಜವಾಬ್ದಾರಿಯಾಗಿದೆ. ಆದರೆ ಬದುಕುವ ಕಲೆಯನ್ನು ತಿಳಿಸುವ ಮನೋಭಾವನೆ ನಮ್ಮಲ್ಲಿ ಇಲ್ಲವಾಗಿದೆ. ಹೀಗಾಗಿ ಮಾನವ ಲೋಕದ ಸುಂದರ ಕುಸುಮಗಳಾದ ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ಹಾಗೂ ಮಕ್ಕಳ ಸೃಜನಶೀಲತೆಯನ್ನು ಬೆಳೆಸಲು ಮಕ್ಕಳಿಗೆ ದೊಡ್ಡವರ ಆದರ್ಶ

ಜೀವನ ಮೌಲ್ಯಗಳು ತಿಳಿಸಿ ಹೇಳುವುದು ಸೂಕ್ತವೆನಿಸುತ್ತದೆ. ನೂರು ವರ್ಷಗಳ ಹಿಂದೆ ಅಂದಿನ ಜಾನಾಂಗ ಶರಣ ಜೀವಿಗಳು, ವಿದ್ವಾಂಸರು, ಶಿವಯೋಗಿಗಳು, ಅವರೆಲ್ಲರ ತತ್ವ ಆದರ್ಶಗಳು ಇಂದಿನ ಮಕ್ಕಳಿಗೆ ಅವಶ್ಯವೆನಿಸುತ್ತದೆ.

"ಇಂದಿನ ವಿದ್ಯಾರ್ಥಿಗಳಿಗೆ ತಮ್ಮ ಹೆತ್ತವರ ಬಗ್ಗೆ ಪ್ರೀತಿ, ವಿನಯ, ವಿಧೇಯತೆ, ಇರಬೇಕು ಹಾಗೆಯೇ ವಿದ್ಯೆಯ ದಾಹ ತೀರಿಸಲು ಮಕ್ಕಳಿಗೆ ಅನೇಕ ಗ್ರಂಥಗಳನ್ನು ಓದಲು ಕೊಡಬೇಕು. ವಿದ್ಯೆಯು ಸಂಸ್ಕಾರವನ್ನು ತಿಳಿಸುತ್ತದೆ. ಶರಣರ ಜೀವನ ಚರಿತ್ರೆಗಳನ್ನು ಬರಿ ಪುಸ್ತಕ ಓದಿ ಮನನ ಮಾಡುವುದರಿಂದ ಏನೂ ಪ್ರಯೋಜನವಾಗದು. ಅದನ್ನು ನಮ್ಮ ಬದುಕಿನಲ್ಲಿ ಅಳವಡಿಸಕೊಳ್ಳಬೇಕು. ಅಂದಾಗ ನಾವು ಒಳ್ಳೆಯ ಸಂಸ್ಕೃತಿ ಹೊಂದಲು ಸಾದ್ಯ. ಭಾವೈಕ್ಯತೆಯಿಂದ ಕೂಡಿದಾಗ ನಿಸ್ವಾರ್ಥತೆಯಿಂದ ಬದುಕಿದಾಗ ಮಾತ್ರ ನಮ್ಮ ಬದುಕಿಗೊಂದು ಅರ್ಥ ಬರುತ್ತದೆ.

**ನಿಜಗುಣ ಶಿವಯೋಗಿಗಳ ಜೀವನ ಚರಿತ್ರೆ :**

ನಿಜಗುಣ ಶಿವಯೋಗಿಗಳ ಕಾಲ ಸುಮಾರು ೧೫೦೦ ವೀರಶೈವ ಕವಿ ಈತನು ಷಟ್ ಶಾಸ್ತ್ರಗಳೆಂದು ಪ್ರಸಿದ್ಧವಾಗಿರುವ 'ಅನುಭವಸಾರ', 'ಕೈವಲ್ಯ ಪದ್ಧತಿ ಪರಮಾರ್ಥಗೀತೆ', 'ಪರಮಾನುಭವ ಭೋದೆ', 'ಪರಮಾರ್ಥ ಪ್ರಕಾಶಿಕೆ' ಮತ್ತು 'ವಿವೇಕ ಚಿಂತಾಮಣಿ' ಎಂಬ ಗ್ರಂಥಗಳನ್ನು ರಚಿಸಿದ್ದಾರೆ.

"ಧರ್ಮಗಳಲ್ಲಿ ಎಂದಿಗೂ ಆ ಧರ್ಮ ಶ್ರೇಷ್ಠ, ಈ ಧರ್ಮ ಕನಿಷ್ಠ ಎಂದಿಲ್ಲವೇ ಇಲ್ಲ. ಎಲ್ಲಾ ಧರ್ಮಗಳು ಸಾರುವುದು ಒಂದೇ ನೀತಿ ಮಳೆ ನೀರು ವಿವಿಧ ನದಿಗಳಾಗಿ ಹರಿದು ಕೊನೆಗೆ ಸಾಗರವನ್ನೇ ಸೇರುವಂತೆ ವಿವಿಧ ಧರ್ಮ ಮಾರ್ಗಗಳ ಮೂಲಕ ಸಲ್ಲುವ ಪೂಜೆ, ಪ್ರಾರ್ಥನೆಗಳು, ಸೇರುವುದು ದಯಸಾಗರನಾದ ಆ ದೇವರನ್ನೇ ಸಾಮರಸ್ಯದ ಸಹಬಾಳ್ವೆಯೇ ಧರ್ಮದ ಸಂದೇಶವಾಗಿದೆ.

ಆದ್ದರಿಂದ ಸರ್ವಧರ್ಮ ಸಮಾನತೆಯ ದೃಷ್ಟಿಯಿಂದ ಎಲ್ಲರ ಒಳಿತನ್ನು, ಶುಭವನ್ನು ಬಯಸುತ್ತ ಬದುಕುವ ಉದಾರ ಚರಿತರು ನಾವಾಗಬೇಕು. ಇಂದಿನ ಜಾಗತೀಕರಣದಿಂದಾಗಿ ಜಾನಪದ ಮತ್ತು ದೇಶಿ ಸಂಸ್ಕೃತಿ ಕಣ್ಮರೆಯಾಗುತ್ತಿದೆ. ಹಿರಿಯರ, ಶರಣರ, ಉದಾತ್ತ ಚಿಂತನೆಗಳು ಮಕ್ಕಳಿಗೆ ಉಣಬಡಿಸಬೇಕಾಗಿದೆ. ಇಂಥ ಸಂಕ್ರಮಣ ಕಾಲದಲ್ಲಿ ಮಕ್ಕಳಿಗೆ ದೇಸಿ ಸಂಸ್ಕೃತಿಯ ಅರಿವು ಮೂಡಿಸಬೇಕು. ಜೀವನ ಚರಿತ್ರೆಗಳ ಸಾರ ಮಕ್ಕಳಿಗೆ ತಿಳಿಸಬೇಕಾಗಿದೆ. ಮಕ್ಕಳಿಗಾಗಿ ಕವಿತೆ, ಕಥೆ ಬರುಯುವುದು ಬಹಳ ಸಂತೋಷದ ಸಂಗತಿ. ಆದರೆ ಮಕ್ಕಳಿಗಾಗಿ ದೊಡ್ಡವರ ಜೀವನ ಚರಿತ್ರೆ ಬರೆಯುವದೆಂದರೆ ಅಷ್ಟು ಸುಲಭದ ಮಾತಲ್ಲ.

ಸಂಗಮೇಶ ಗುಜಗೊಂಡರು ಒಂದು ಹೊಸ ಹೆಜ್ಜೆಯೊಂದಿಗೆ ಮಕ್ಕಳಿಗಾಗಿ ಕೈವಲ್ಯ ಚಕ್ರವರ್ತಿ ನಿಜಗುಣ ಶಿವಯೋಗಿ ಎಂಬ ಅವರ ಜೀವನ ಚರಿತ್ರೆಯನ್ನು ಮಕ್ಕಳ ಮನಸ್ಸಿಗೆ

ಹಿಡಿಸುವಂತೆ ಒಂದು ವಿಶಿಷ್ಟವಾದ ಸಂದರ್ಶನದ ಮಾದರಿಯಲ್ಲಿ ಪ್ರವಾಸದ ಸಮಯದಲ್ಲಿ ಗುರುಗಳು ಶಿಷ್ಯರಿಗೆ ಹೇಳುವ ಕಥಾಸಾರಾಂಶವೇ ಶಿವಯೋಗಿಗಳ ಜೀವನ, ಗುರುದೀಕ್ಷೆ, ಸಮಾಜ ಸೇವೆಯನ್ನು ಎಳೆಎಳೆಯಾಗಿ ವಿವರಿಸುತ್ತ ಹೋದಾಗ ಮಕ್ಕಳಿಗೆ ಪ್ರವಾಸ ಸಮಯ ಹೇಗೆ ಹೋಯಿತು ಅನ್ನುವುದೇ ಗೊತ್ತಾಗುವದಿಲ್ಲ. ನಿಜಗುಣ ಶಿವಯೋಗಿಗಳ ಚರಿತ್ರೆಯನ್ನು ಉತ್ತಮ ಪ್ರಾರಂಭ ಕುತೂಹಲ ಪೂರಿತ ಬೆಳವಣಿಗೆ ಊಹೆಗೆ ಸಿಲುಕದ ಮುಕ್ತಾಯ ಮತ್ತು ಕ್ರಮ ಬದ್ಧತೆಯಿಂದ ನೇರವಾಗಿ ಅರ್ಥವಾಗುವಂತಿದ್ದರೆ ಅದೊಂದು ಮೇಲ್ಮಟ್ಟದ ರಚನೆಯಾಗಿ ಉಳಿಯುತ್ತದೆ. ಸಾಮಾನ್ಯ ಅಂಸವನ್ನು ಅದ್ಭುತ ಕಲ್ಪನಾ ವಿಲಾಸದಲ್ಲಿ ಹೆಣೆಯುವದು ಮಕ್ಕಳ ಸಾಹಿತ್ಯದ ತಂತ್ರ ರಹಸ್ಯ.

ಹೂವಿನಹಳ್ಳಿ ಒಂದು ಊರು, ಅಲ್ಲಿ ಸುಭಾಷಚಂದ್ರ ಬೋಸ್ ಪ್ರೌಢಶಾಲೆ ಮಕ್ಕಳಿಗೆ ಗುಣಮಟ್ಟದ ಶಿಕ್ಷಣ ನೀಡಬಲ್ಲ ಒಂದು ಉತ್ತಮ ಸಂಸ್ಥೆ. ಪ್ರತಿ ವರ್ಷದಂತೆ ಆ ಶಾಲೆಯ ಮಕ್ಕಳು ಹಾಗೂ ಶಿಕ್ಷಕರು ರಾಜ್ಯದ ಕೆಲವೊಂದು ಪ್ರೇಕ್ಷಣೆಯ ಸ್ಥಳಗಳನ್ನು ನೋಡಿಕೊಂಡು ಬರಲು ತೀರ್ಮಾನಿಸಿದರು. ಸುಮಾರು ಐವತ್ತು ವಿಧ್ಯಾರ್ಥಿಗಳು ಹಾಗೂ ನಾಲ್ವರು ಶಿಕ್ಷಕರು ಬಸ್ ಮುಖಾಂತರ ರಾತ್ರಿ ೯-೦೦ ಗಂಟೆಗೆ ಶಾಲಾ ಆವರಣದಿಂದ ಹೊರಟರು ಬೆಳಿಗ್ಗೆ ೫-೦೦ ಗಂಟೆಗೆ ಅದು ಉಳುವಿ ತಲುಪಿತು. ಸೂರ್ಯೋದಯ ಆಗುತ್ತಿದ್ದಂತೆ ಮಕ್ಕಳಿಗೆ ಎಲ್ಲಿಲ್ಲದ ಸಂತೋಷ ಯಾಕೆಂದರೆ ಉಳವಿ ಸಹ್ಯಾದ್ರಿ ಪರ್ವತ ತಪ್ಪಲಿನಲ್ಲಿ ಇದ್ದು ಅದು ನಿತ್ಯ ಹರಿದ್ವರ್ಣಗಳ ಕಾಡುಗಳ ರಮ್ಯ ತಾಣವಾಗಿತ್ತು. ಎಲ್ಲರೂ ಬಸ್ಸಿನಿಂದ ಇಳಿದು ಸ್ನಾನ ಮುಗಿಸಿ, ಚೆನ್ನ ಬಸವಣ್ಣನ ದರ್ಶನ ಪಡೆದು ಕಾರವಾರ, ಗೋಕರ್ಣ, ಸಿರಸಿ, ಬನವಾಸಿ, ಜೋಗ ಜಲಪಾತ, ಉಡುಪಿ, ಧರ್ಮಸ್ಥಳ, ಬೇಲೂರು, ಹಳೆಬೀಡು, ಶ್ರವಣಬೆಳಗೋಳ ಹೀಗೆ ನೋಡುತ್ತ ಕರ್ನಾಟಕವನ್ನೇ ಸುತ್ತಾಡಿ ಎಲ್ಲರೂ ಮುದಗೊಂಡರು.

"ಪ್ರವಾಸದ ಬಸ್ಸಿನಲ್ಲಿ ಸರೋಜಿನಿ, ಪಾಟೀಲ ಗುರುಗಳು, ಸಿದ್ದಲಿಂಗ, ಬಸಯ್ಯ, ಮಹೇಶ, ರಫೀಕ, ಭಾವನಾ, ಶಿವಣ್ಣಗುರುಗಳು, ರುಕ್ಮಿಣಿ, ಊರ್ಮಿಳೆ, ಸೋಮಣ್ಣ, ಚಲಪತಿ ಇವರೆಲ್ಲರೂ ಶಂಭುಲಿಂಗನ ಬೆಟ್ಟವನ್ನು ನೋಡಿಕೊಂಡು ಬಂದರು. ಶ್ರೀಮನ್‌ನಿಜಗುಣ ಶಿವಯೋಗಿಗಳ ತಪೋಭೂಮಿ ಅದು, ಎಂದು ಎಲ್ಲ ವಿದ್ಯಾರ್ಥಿಗಳಿಗೆ ಪಾಟೀಲ ಗುರುಗಳು ಹೇಳಿದರು. ಬಸಯ್ಯ ಮಠದಲ್ಲಿ ಅವರಜ್ಜ ಹಾಡುತ್ತಿದ್ದ ನಿಜಗುಣ ಶಿವಯೋಗಿಗಳ ಒಂದು ಹಾಡನ್ನು ಹಾಡಿ ಎಲ್ಲರನ್ನು ಸಂತೋಷಗೊಳಿಸಿದರು.

"ಕಾಯವಿಡಿದಾತ್ಮರಾಶಿಗೆ ಪರತರ
ಮುಕ್ತಿಗುಪಾಯವಿದು
ನಿಜಶಿವ ಮಂತ್ರವಣ್ಣ
ಅವರಿವರೆಂಬುದೇನೋ ಶಿವಶಿವ
ಭಾವನದ ಮಾನವರೊಮ್ಮೆ ತಾವಾಗಲಿ

ಶಿವಮಂತ್ರವಿದನುಸುರೆ
ಬೇಗದೊಳೊಮ್ಮೆ
ಶಿವಮಂತ್ರವಿದನುಸುರೆ"

ನಿಜಗುಣ ಶಿವಯೋಗಿಗಳ ಬಗ್ಗೆ ನಿನಗೇನಾದರೂ ಗೊತ್ತಿದೆಯಾ ಬಸಯ್ಯನಿಗೆ ಪಾಟೀಲ ಗುರುಗಳು ಕೇಳಿದರು ನನಗೆ ಗೊತ್ತಿಲ್ಲ. ಸರ್, ಅವರ ಹಾಡುಗಳು ಮಠ ಮಂದಿರಗಳಲ್ಲಿ ಧಾರ್ಮಿಕ ಕಾರ್ಯಕ್ರಮಗಳಲ್ಲಿ ಹಾಡುವುದನ್ನು ಕೇಳಿದ್ದೇನೆ. ಪಾಟೀಲ ಗುರುಗಳು ಎಲ್ಲರನ್ನು ಒಂದೆಡೆ ಕೂಡ್ರಿಸಿ ನಿಜಗುಣ ಶಿವಯೋಗಿಗಳ ಜೀವನ ಚರಿತ್ರೆಯನ್ನು ಹೇಳಲು ಪ್ರಾರಂಭಿಸದರು. ಎಲ್ಲ ಮಕ್ಕಳ ಶಾಂತ ಚಿತ್ತದಿಂದ ಕುಳಿತು ಕೇಳಲು ಪ್ರಾರಂಭಿಸಿದರು.

"ಶಂಬುಲಿಂಗನ ಬೆಟ್ಟ ನಿಜಗುಣ ಶಿವಯೋಗಿಗಳ ತಪೋಭೂಮಿ, ತಪೋಭೂಮಿ ಎಂದರೇನು ಸರ್. ಎಂದು ಮಹೇಶ ಕೇಳಿದನು. ತಪೋಭೂಮಿ ಎಂದರೆ ತಪ್ಪಸ್ಸು ಮಾಡಿದ ಸ್ಥಳ ಎಂದರು ಪಾಟೀಲ ಗುರುಗಳು ಹೇಳಿದರು. ಶಿವಣ್ಣ ಗುರುಗಳು ಹಾಗೂ ಮಕ್ಕಳೆಲ್ಲರು ಶಿವಯೋಗಿಗಳು ತಪಸ್ಸು ಮಾಡಿದ ಗವಿಯನ್ನು ನೋಡಿದರು. ಆ ದೇವಾಲಯದಲ್ಲಿ ದುರ್ಗಿ ಮಂಟಪ ಇತ್ತು. ಅದರ ಕಥೆಯನ್ನು ಅಜ್ಜನೊಬ್ಬ ವಿವರಿಸಿ ಎಲ್ಲರಿಗೂ ಹೇಳಿದನು. ಈ ಮಂಟಪದಲ್ಲಿ ಶಿವಯೋಗಿಗಳು ಯೋಗ, ಧ್ಯಾನ ಮಾಡುತ್ತಿದ್ದರು. ಇದೇ ಸ್ಥಳದಲ್ಲಿ ಮಾಯಾ ರಾಕ್ಷಸಿಯೊಬ್ಬಳು ಇದ್ದಳು. ಶಿವಯೋಗಿಗಳ ಮಹಾ ಪೂಜೆಗೆ ಅವಳು ಅಡ್ಡಿ ಪಡಿಸುತ್ತಿದ್ದಳು. ಶಿವಯೋಗಿಗಳು ಅವಳ ಕುಚೇಷ್ಟೆಯನ್ನೆಲ್ಲಾ ತಾಳ್ಮೆಯಿಂದ ಸಹಿಸಿಕೊಂಡರು. ಅವರ ತಾಳ್ಮೆಯನ್ನು ಕಂಡು ರಾಕ್ಷಸಿಗೆ ನಾಚಿಕೆಯಾಯಿತು. ಶಿವಯೋಗಿಗಳಲ್ಲಿ ಕ್ಷಮೆ ಕೇಳಿದಳು. ಆಗ ಹೂವಿನೊಡನೆ ದಾರವೂ ಸ್ವರ್ಗಕ್ಕೆ ಹೋಯಿತು. ಅಂದ ಹಾಗೆ ಶಿವಯೋಗಿಗಳು ಅವಳಿಗೆ ಮಂಟಪದಲ್ಲಿಯೇ ಇರಲು ಹೇಳಿದರು. ಅಂದು ರಕ್ಕಸಿಗೆ ಮುಕ್ತಿ ದೊರೆಯಿತು. ಇಂದಿಗೂ ಶಿವಯೋಗಿಗಳ ಜೊತೆಗೆ ರಕ್ಕಸಿಗೂ ಪೂಜೆ ಸಲ್ಲುತ್ತಿದೆ. ಎಂದು ಅಜ್ಜ ವಿವರವಾಗಿ ಎಲ್ಲವನ್ನು ವಿವರಿಸಿದನು. ಶಿವಯೋಗಿಗಳ ಸಂಪೂರ್ಣ ಜೀವನ ಚರಿತ್ರೆಯನ್ನು ಪಾಟೀಲ ಗುರುಗಳು ಎಲ್ಲ ಮಕ್ಕಳಿಗೂ ವಿವರಿಸಿ ಹೇಳಿದರು. ಅವರು ಮಹಾ ಪುರುಷರಲ್ಲಿ ಅಗ್ರ ಪಂಕ್ತಿಯಲ್ಲಿದ್ದಾರೆ. ಮತ್ತೆ ಮಕ್ಕಳನ್ನು ಕರೆದುಕೊಂಡು ಬಸ್ ಹತ್ತಿ ಎಲ್ಲರೂ ಮುಂದೆ ಬಂದರು. ಅಲ್ಲಿ ಶಿವಯೋಗಿಗಳ ಭವ್ಯವಾದ ಮಠವಿತ್ತು. ಎಲ್ಲರೂ ಬಸ್ಸಿನಿಂದ ಇಳಿದು ಮಠದೊಳಗೆ ಹೋದರು. ಎದುರಿಗೆ ಶಿವಯೋಗಿಗಳ ಭವ್ಯ ಮೂರ್ತಿ ಇತ್ತು. ಎಲ್ಲರೂ ಮೂರ್ತಿಗೆ ನಮಸ್ಕರಿಸಿದರು.



ಆ ಮಠದ ಸ್ವಾಮಿಗಳು ಎಲ್ಲರ ಕ್ಷೇಮವನ್ನು ಕೇಳಿ, ಪ್ರಸಾದ ಸ್ವೀಕರಿಸಲು ಹೇಳಿದರು. ಎಲ್ಲರು ಪ್ರಸಾದ ಸ್ವೀಕರಿಸಿ ಬಂದರು. ಸ್ವಾಮಿಗಳ ಹತ್ತಿರ ಬಂದು ಕುಳಿತರು. ಶಿವಯೋಗಿಗಳ ಕುರಿತು ನಿಮಗೇನಾದರೂ ಗೊತ್ತಿದೆಯೇ? ಎಂದು ಕೇಳಿದರು. ಅಜ್ಜ

ಹೇಳಿದ ಸ್ವಲ್ಪ ಘಟನೆಯನ್ನು ಊರ್ಮಿಳೆ ಸ್ವಾಮಿಗಳಿಗೆ ಹೇಳಿದಳು. ಅದನ್ನು ಆಲಿಸಿ ಇರಲಿ, ಈಗ ನಾನು ಅವರ ಕುರಿತು ಒಂದು ಕಥೆಯನ್ನು ಹೇಳುತ್ತೇನೆ ಕೇಳಿ ಎಂದಾಗ ಎಲ್ಲರೂ ಸ್ವಾಮಿಗಳ ಹತ್ತಿರ ಕುಳಿತರು. ಗುರುಗಳು ಅಲ್ಲಿಯೇ ಕುಳಿತರು. ಸ್ವಾಮಿಗಳು ಗೌತಮ ಬುದ್ಧನ ಕತೆ ಪರಿವರ್ತನೆಯಾಗಿ ಆತ ಬುದ್ಧನಾದ ಎಂದು ನಾವು ಇತಿಹಾಸದಲ್ಲಿ ಕೇಳಿದ್ದೇವೆ. ಓದಿದ್ದೇವೆ ಎಂದು ಪ್ರಾರಂಭಿಸಿದರು.

ಗೌತಮ ಬುದ್ಧನಂತೆ ನಿಜಗುಣ ಶಿವುಯೋಗಿಗಳೂ ರಾಜನಾಗಿದ್ದರು.ಎಂದಾಗ ರಾಜನಾದವರು ಶಿವಯೋಗಿಗಳು ಹೇಗಾದರು ಎಂದು ಊರ್ಮಿಳೆ ಕೇಳಿದಳು. ನಿಜಗುಣ ಶಿವಯೋಗಿಗಳ ಕುರಿತು ಹೇಳಬೇಕೆಂದರೆ ಸಾಕಷ್ಟಿದೆ. ಆದರೆ ರಾಜ ಶಿವಯೋಗಿ ಹೇಗಾದರೂ ಅಷ್ಟೇ ಹೇಳುತ್ತೇನೆ. ಶಿವಯೋಗಿಗಳು ಮೊದಲು ರಾಜನಾಗಿದ್ದಾಗ ಯಳಂದೂರು, ಚಿಲಕವಾಡಿ ಹಾಗೂ ಸುತ್ತಲಿನ ಪ್ರದೇಶಗಳನ್ನು ವಸಪಡಿಸಿಕೊಂಡು ಆಳುತ್ತಿದ್ದರು. ಬಾಲ್ಯದಲ್ಲಿಯೇ ನಿಜಗುಣರು ವೇದ, ಶಾಸ್ತ್ರ, ಪುರಾಣಗಳನ್ನು ಅಧ್ಯಯನ ಮಾಡಿದ್ದರು. ದಯಾಮೂರ್ತಿಗಳಾಗಿದ್ದರು. ಪ್ರಜೆಗಳನ್ನು ಪ್ರೀತಿಯಿಂದ ಕಾಣುತ್ತಿದ್ದರು, ಅವರು ಜಂಗಮ ಸೇವೆಯಲ್ಲಿ ತೊಡಗಿದ್ದರು.

“ನಿಜಗುಣರು ಒಮ್ಮೆ ಕ್ಷೌರಕ್ಕೆ ಕುಳಿತಿದ್ದರು. ಆಗ ಜಂಗಮ ಮೂರ್ತಿಯೊಬ್ಬರು ಅವರ ಬಳಿಗೆ ಬಂದು ತಮ್ಮ ಹಸಿವನ್ನು ಹಿಂಗಿಸಲು ಪ್ರಸಾದ ವ್ಯವಸ್ಥೆ ಮಾಡಬೇಕೆಂದರು. ಜಂಗಮ ಸೇವೆಯೆಂದರೆ ನಿಜಗುಣರಿಗೆ ಪಂಚಪ್ರಾಣ. ಜಂಗಮರಿಗೆ ಪ್ರಸಾದ ವ್ಯವಸ್ಥೆ ಮಾಡಲು ತಮ್ಮ ಪತ್ನಿಗೆ ಹೇಳಿದರು. ರಾಜನ ಅಣತಿಯಂತೆ ರಾಣಿ ಜಂಗಮರ ಸ್ನಾನದ ವ್ಯವಸ್ಥೆ ಮಾಡಿದಳು. ಸ್ನಾನ ಮಾಡಿದ ಮೇಲೆ ಪೂಜೆ ಮುಗಿಸಿ ಜಂಗಮರು ಪ್ರಸಾದ ಸ್ವೀಕರಿಸಿದರು. ತಕ್ಷಣವೇ ಜಂಗಮರು ತೆರಳಿದರು. ಇದನ್ನು ಕಂಡು ರಾಜನಿಗೆ ಅನುಮಾನ ಬಂತು, ಈ ಕುರಿತು ರಾಣಿಯನ್ನು ವಿಚಾರಿಸಿದರು. ಆಗ ರಾಣಿಯು ಜಂಗಮರು ಅವಸರ ಮಾಡಿದರು ಬೇಗನೆ ಪ್ರಸಾದ ಬಡಿಸುವಂತೆ ಹೇಳಿದರು. ನಾನೇನು ಮಾಡಲಿ ನಿನ್ನೆಯ ತಂಗುಳನ್ನವನ್ನೇ ಬಡಿಸಿದೆ ಎಂದು ಹೇಳಿದಳು. ನಿಜಗುಣರಿಗೆ ಪತ್ನಿಯ ಮಾತು ಕೇಳಿ ಬೇಸರವಾಯಿತು. ನಮ್ಮ ಮನೆಗೆ ಬಂದ ಜಂಗಮರ ಅತಿಥ್ಯ, ಸೇವೆ ಸರಿಯಾಗಿ ಆಗಲಿಲ್ಲವಲ್ಲ ಎಂದು ಮನನೊಂದು ಅಂದೇ ಅವರು ಮಡದಿ ಮಕ್ಕಳು, ರಾಜ್ಯವನ್ನು ಬಿಟ್ಟು ಶಂಭುಲಿಂಗನ ಬೆಟ್ಟಕ್ಕೆ ಹೋದರು. ಅಲ್ಲಿ ತಪಸ್ಸು ಮಾಡಿ ಮಹಾಯೋಗಿಗಳಾದರು, ಮುನಿಗಳಾದರು ಎಂದು ಸ್ವಾಮಿಗಳು ನಿಜಗುಣರ ಕಥೆಯನ್ನು ಹೇಳಿ ಮುಗಿಸಿದರು. ಇದನ್ನೇ ಕೇಳಿದ ನಂತರ ಪಾಟೀಲ ಗುರುಗಳು ಹಾಗೂ ಮಕ್ಕಳು ಮುಂದಿನ ಸ್ಥಳ ನೋಡಲು ಹೊಗೇನುಕಲ್ ಜಲಪಾತಕ್ಕೆ ಹೊರಟರು. ಹೊಗೇನಕಲ್ ಜಲಪಾತ ತಲುಪಿ ಅಲ್ಲಿ ಅರ್ಧ ಚಂದ್ರಾಕೃತಿಯ ಕಣಿವೆಯಲ್ಲಿ ಹದಿನೇಳು ಜಲಧಾರೆಗಳು ನೋಡಿ ಸಂತೋಷಪಟ್ಟರು. ಇದು ಭಾರತದ ನಯಾಗಾರ ಎಂದು ಹೇಳಬಹುದು. ಇದು ೪೦ ಮೀಟರ ಎತ್ತರದಿಂದ ಆಳಕ್ಕೆ ದುಮ್ಮಿಕ್ಕುತ್ತದೆ. ಆ ರಭಸಕ್ಕೆ ನೀರು ಹೋಗೆಯಂತೆ ಕಾಣುತ್ತದೆ. ಅದಕ್ಕೆ ಹೊಗೇನಕಲ್

ಜಲಪಾತ ಎಂದು ಕರೆದಿರಬಹುದು. ಇದು ನೋಡಿದ ಮೇಲೆ ಪಾಟೀಲ ಗುರುಗಳು ಹಾಗೂ ಎಲ್ಲಾ ಮಕ್ಕಳು ಬಸ್ಸನ್ನು ಏರಿ ಮುಂದಿನ ಸ್ಥಳ ನೋಡಲು ಹೊರಟರು. ಬಸ್ಸಿನಲ್ಲಿ ಸುಹಾಸಿನಿ ನಿಜಗುಣ ಶಿವಯೋಗಿಗಳ ಹಾಡನ್ನು ಹೇಳಿದಳು. ಎಲ್ಲರು ಚಪ್ಪಾಳೆ ತಟ್ಟಿದರು. ನಿಜಗುಣ ಶಿವಯೋಗಿಗಳ "ಕೈವಲ್ಯ ಪದ್ಧತಿ" ಕುರಿತು ಪಾಟೀಲ ಗುರುಗಳು ವಿವರವಾಗಿ ಹೇಳಿದರು.

"ನಿಜಗುಣ ಶಿವಯೋಗಿಗಳ ವಾಣಿ ಮಾನವ ಕುಲಕ್ಕೆ ದಾರಿ ದೀಪವಾಗಿದೆ. ಶಿವಯೋಗಿಗಳು ಕನ್ನಡ ನಾಡಿನ ಶ್ರೇಷ್ಠ ಯೋಗಿಗಳು ದಾರ್ಶನಿಕ ಕವಿಗಳೂ ಅಗಿದ್ದರು.

"ಶ್ರೀ ಗುರು ವಚನದಿಂದಧಿಕ ಸುಧೆಯುಂಟೆ
ರಾಗದಿಂ ಬೇರಿನ್ನು ಭವಬೀಜವುಂಟೆ
ನರಜನ್ಮದಿಂದಹದೊಳು ಮಿಗಿಲುಂಟೆ
ಕರಣ ವಿಜಯದಿಂದೆ ಕಲಿತನಮುಂಟೆ
ಧರೆಯಾಚದೆಯಿಂದೆ ಲಘುತರಮುಂಟೆ
ಪರಬೊಮ್ಮದರಿವಿನಿಂದುರೆ ಜಾಣ್ಮೆಯುಂಟೆ"

ನಿಜಗುಣ ಶಿವಯೋಗಿಗಳ ಈ ಪದ್ಯವನ್ನು ಪಾಟೀಲ ಗುರುಗಳು ಮಕ್ಕಳಿಗೆ ಹೇಳಿ ಕೊಟ್ಟರು.

ನಿಜಗುಣರು ಈಗಿನ ಚಾಮರಾಜನಗರ ಜಿಲ್ಲೆಯ ಯಳಂದೂರು, ಗಾಳಿಪುರ, ಚಿಲಕವಾಡಿ ಮುಂತಾದ ಪ್ರದೇಶಗಳ ಸಂಸ್ಥಾನದ ಒಡೆಯರಾಗಿದ್ದರು. ಇವರ ತಂದೆಯ ಹೆಸರು ಓಂಕಾರ ಭೂಪಾಲ. ತಾಯಿ ಹೆಸರು ಸರ್ವಮಂಗಳಾದೇವಿ. ಇವರ ಪತ್ನಿಯ ಹೆಸರು ಮಂಗಳೆ. ಇವರ ಮಗನ ಹೆಸರು ವಿರುಪಾಕ್ಷ. ಇವರು ಜೀವಿಸಿದ ಕಾಲಾವಧಿ ಸುಮಾರು ಕ್ರಿಶ. ೧೫೦೦ ಎಂದು ವಿದ್ವಾಂಸರು ಹೇಳಿದ್ದಾರೆ.

ನಿಜಗುಣರು ವೀರಶೈವ ಮತದವರಾಗಿದ್ದರೂ ಯಾವುದೇ ಮತ ಪಂಥದ ಪ್ರಚಾರಕರೂ ಆಗಿರಲಿಲ್ಲ ಎಂಬುದನ್ನು ತಿಳಿದುಕೊಳ್ಳಬೇಕು. ಇಡೀ ಮಾನವ ಕುಲದ ಕಲ್ಯಾಣ ಬಯಸಿದವರು ನಿಜಗುಣರು. ನಿಜಗುಣರಿಗೆ ಇಬ್ಬರು ಗುರುಗಳು ಇದ್ದರು. ಒಬ್ಬರು ಶಂಭುಲಿಂಗ ಸ್ವಾಮಿಗಳು, ಇನ್ನೊಬ್ಬರು ಶ್ರೀ ಭುಜಲಿಂಗ ಸ್ವಾಮಿಗಳು. ನಿಜಗುಣ ಶಿವಯೋಗಿಗಳಿಗೆ ಸಾಹಿತ್ಯದಲ್ಲಿ ಆಸಕ್ತಿ ಇತ್ತು. ಅವರು ಹಲವಾರು ಪುಸ್ತಕಗಳನ್ನು ಬರೆದಿದ್ದಾರೆ. "ಅನುಭವ ಸಾರ, ಪಾರಮಾರ್ಥಗೀತೆ, ಪರಮಾನುಭವ ಭೋದೆ, ಕೈವಲ್ಯ ಪದ್ಧತಿ, ಪಾರಮಾರ್ಥ ಪ್ರಕಾಶಿಕೆ, ವಿವೇಕ ಚಿಂತಾಮಣಿ, ಹೀಗೆ ಹಲವು ಕೃತಿಗಳನ್ನು ರಚಿಸಿದ್ದಾರೆ. ನಿಜಗುಣ ಶಿವಯೋಗಿಗಳು ಕವಿಗಳೂ ಯೋಗ ಸಾಧಕರೂ ಆಗಿದ್ದರು. ಮತ್ತು ಸಂಗೀತದಲ್ಲಿ ಅಪಾರವಾದ ಪಾಂಡಿತ್ಯವಿತ್ತು. ಹೀಗೆ ಶಿವಯೋಗಿಗಳ ಸಮಗ್ರ ಜೀವನ ಚರಿತ್ರೆ ಅವರ ಪವಾಡಗಳು ಎಲ್ಲಾ ಮಕ್ಕಳಿಗೆ ಪಾಟೀಲ ಗುರುಗಳು ತಿಳಿಸಿಕೊಟ್ಟರು. ಎಲ್ಲ ಮಕ್ಕಳ ಪರವಾಗಿ ಉರ್ಮಿಳೆ ಪಾಟೀಲ ಗುರುಗಳಿಗೆ ಕೃತಜ್ಞತೆಗಳನ್ನು ಸಲ್ಲಿಸಿದಳು.

ಮಲೆಮಹಾದೇಶ್ವರ ಬೆಟ್ಟದ ಸಮಿತಿ ಅವರು ಎಲ್ಲರನ್ನು ಪ್ರಸಾದಕ್ಕೆ ಕರೆದರು. ಮಕ್ಕಳು ಗುರುಗಳು, ನಿಜಗುಣ ಶಿವಯೋಗಿಗಳ ಪದ್ಯವನ್ನು ಹಾಡಿ ಪ್ರಸಾದವನ್ನು ಸ್ವೀಕರಿಸಿದರು.

"ಜ್ಯೋತಿ ಬೆಳಗುತಿದೆ ವಿಮಲ ಪರಂಜ್ಯೋತಿ
ಬೆಳಗುತಿದೆ
ಮಾತು ಮನಂಗಳಿಂದತ್ತತ್ತ ಮೀರಿದ
ಸಾತಿಶಯದ ನಿರುಪಾಧಿಕ ನಿರ್ಮಲ"

ಈ ಮಂಗಳಾರತಿ ಪದ್ಯವನ್ನು ಎಲ್ಲ ಧಾರ್ಮಿಕ ಪದ್ಯಗಳಲ್ಲಿ ಹಾಡುತ್ತಾರೆ. ಎಂದು ಪಾಟೀಲ ಗುರುಗಳು ಹಾಡಿನ ಮಹತ್ವವನ್ನು ಹೇಳಿದರು.

ಒಟ್ಟಾರೆಯಾಗಿ ಸಂಗಮೇಶ ಗುಜಗೊಂಡರು ಸುಲಭ ಶಬ್ಧ, ಸಾದಾ ಸರಳ ಪದ ಸಂಧಿಗಳನ್ನು ಜೋಡಿಸಿ, ಸತ್ವದಿಂದಲೂ, ಸಿದ್ದಿಯಿಂದಲೂ ಕೂಡಿದ ಅವರ ಮಕ್ಕಳ ಕವಿತೆಗಳು, ಕತೆಗಳು. ಜೀವನ ಚರಿತ್ರೆ, ಗಮನ ಸೆಳೆಯುತ್ತವೆ. ಗುಜಗೊಂಡರು ಅನನ್ಯ ಮಕ್ಕಳ ಕವಿ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಜೀವನ ಚರಿತ್ರೆ ಮಕ್ಕಳ ಎದೆಯೊಳಗೆ ಒಂದು ಸಾತ್ವಿಕ ಶ್ರದ್ಧೆಯನ್ನು ಬೆಳಗಿಸಬಲ್ಲಂತಹ ಸಾಮರ್ಥ್ಯ ಹೊಂದಿದೆ. ಮಕ್ಕಳ ಮನಸ್ಸಿಗೆ ಹತ್ತಿರವಾಗಿ ಪದ್ಯ ಗದ್ಯಗಳನ್ನು ರಚಿಸುವ ಸಂಗಮೇಶ ಗುಜಗೊಂಡರು ಕನ್ನಡ ಸಾಹಿತ್ಯದಲ್ಲಿ ಯಾವತ್ತೂ ಅಭಿನಂದನಾರ್ಹರು.

**ಸಮಾರೋಪ:**

೧. ನೂರು ನಾಣ್ಯ ಮೂರು ಮಾತು" ಕಥಾ ಸಂಕಲನದಲ್ಲಿ ಒಟ್ಟು ೧೦ ಕಥೆಗಳನ್ನು ಒಳಗೊಂಡ ಸುಂದರ ಕೃತಿಯಾಗಿದೆ. ಇಲ್ಲಿ ಸಂಗಮೇಶ ಗುಜಗೊಂಡರ ಜಾಣ್ಮೆ, ಜೀವನ ಪ್ರೀತಿ, ಆಳವಾದ ಜ್ಞಾನದಿಂದ ಕಥೆಗಳು ಸಾಕಷ್ಟು ಚೆನ್ನಾಗಿ ವ್ಯಕ್ತಗೊಂಡಿವೆ. ಮಣ್ಣಿನಲ್ಲೇ ಚಿನ್ನವಿದೆ, ಬದಲಾದ ವ್ಯಾಪಾರಿ, ಪರಮ ಧರ್ಮ, ಗುಟ್ಟಿನ ಪಾಲು, ಧೀರ ಚಿಲ್ಲಾಳ, ಅಜ್ಜ ಹೇಳಿದ ಮಾತು, ವಿಚಿತ್ರ ರಾಜ, ಅಪರೂಪ ಪಂಡಿತ, ಇನಾಮು ಪತ್ರ, ಅಬು ಬಿಟ್ಟು ಅಂಜಾರಕ್ಕೆ ನೂರು ನಾಣ್ಯ ಮೂರು ಮಾತು" ಇಲ್ಲಿ ಸಂಗಮೇಶ ಗುಜಗೊಂಡರು ಕಥೆ ಹೇಳುವ ಕ್ರಿಯೆ, ಕಥೆ ಕಟ್ಟುವ ಛಂದ, ಇಲ್ಲಿಯ ಕಥೆಗಳಲ್ಲಿ ಗತ್ತು, ತನ್ಮಯತೆ ಎದ್ದು ಕಾಣುತ್ತದೆ. ಇವರು ಬರೆದ ಎಲ್ಲಾ ಕಥೆಗಳು ಮಕ್ಕಳಲ್ಲಿ ಪ್ರಾಮಾಣಿಕತೆ, ಉಪಕಾರದ ಮನೋಭಾವನೆ, ನೀತಿಯ ಮೌಲ್ಯಗಳು ಒಳಗೊಂಡಿವೆ.

೨. ಸಂಗಮೇಶ ಗುಜಗೊಂಡರ ಎರಡನೇ ಕಥಾ ಸಂಕಲನ "ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು, "ಈ ಸಂಕಲನದಲ್ಲಿ ಒಟ್ಟು ೧೨ ಕಥೆಗಳಿವೆ. ಮಕ್ಕಳಿಗೆ ಮನರಂಜನೆ ನೀಡುವ ಸುಂದರ ಕಥೆಗಳು ರಚನೆಗೊಂಡಿವೆ. ದೀಪು ಮತ್ತು ಗಾಳಿಪಟ, ಹೋದ ಮಳೆ ಬಂತು, ಬುಲಂದರನ ಸಾಹಸ ಕಳ್ಳ ಶಿಷ್ಯನಾದ,

ರಾಜಕುಮಾರಿಯ ಔದಾರ್ಯದ ಕೆಲಸ ಇದ್ದೇ ಇದೆ. ಭಾಗೀರಥಿಯ ಉಪಾಯ, ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು, ದಾರಿ ಬುತ್ತಿ ನೆತ್ತಿಬುತ್ತಿ, ಗೆಳೆತನ, ಶಿವರಾಜ ಮತ್ತು ಸಣ್ಣ ನದಿ, ಭೂಮಿ ಪೂಜೆ, ಮಕ್ಕಳ ಬೌದ್ಧಿಕ ಗ್ರಹಿಕೆಯನ್ನು ವಿಸ್ತಾರಗೊಳ್ಳುವ, ಮತ್ತು ಮಕ್ಕಳ ಸೃಜನ ಶೀಲತೆಯನ್ನು ವಾಚನಾಭಿರುಚಿ ಹೆಚ್ಚಿಸುವಂತಹ ಮಕ್ಕಳಿಗೆ ಮುದ ನೀಡುವ ಹೊಸ ಬಗೆಯ ಕಥೆಗಳಾಗಿವೆ. ಮಕ್ಕಳಿಗೆ ಓದಲು ಸರಳ, ಆಕರ್ಷಕ ಪ್ರತಿಯೊಂದು ಕಥೆಗಳು ಮಾನವೀಯ ಮೌಲ್ಯಗಳು ಒತ್ತಿ ಹೇಳುತ್ತವೆ.

೩. ಕೈವಲ್ಯ ಚಕ್ರವರ್ತಿ ನಿಜಗುಣ ಶಿವಯೋಗಿ, ಇದೊಂದು ಜೀವನ ಚರಿತ್ರೆ, ಇದು ಮಕ್ಕಳ ಸಾಹಿತ್ಯ ಮಾಲೆಯಾಗಿ ಪ್ರಕಟಗೊಂಡಿದೆ. ಪೂಜ್ಯ ಚೆನ್ನವೀರ ಸ್ವಾಮೀಜಿ ಪ್ರತಿಷ್ಠಾನ ಸಿಂದಗಿ, ಪೂಜ್ಯರ ಪಟ್ಟಾಧಿಕಾರದ ರಜತಮಹೊತ್ಸವದ ನೆನಪಿಗಾಗಿ ಮಕ್ಕಳಿಗಾಗಿ ಪೂಜ್ಯರ ಆಶಯದಂತೆ ಸಂಗಮೇಶ ಗುಜಗೊಂಡರು ನಿಜಗುಣಿ ಶಿವಯೋಗಿಗಳ ಜೀವನ ಚರಿತ್ರೆಯನ್ನು ಒಂದು ಪ್ರವಾಸ ಕಥನದ ಮೂಲಕ ಸವಿಸ್ತಾರವಾಗಿ ವಿವರಿಸಿ ಮಕ್ಕಳಿಗೆ ಉಣಬಡಿಸಿದ್ದಾರೆ. ಮಕ್ಕಳಿಗೆ ಕಲೆ ಸಾಹಿತ್ಯ, ಶಿಕ್ಷಣ, ಜೀವನ ಚರಿತ್ರೆಗಳು, ಬಹಳ ಮುಖ್ಯವಾಗಿರುವುದರಿಂದ ಪ್ರತಿಷ್ಠಾನದವರು ಇಂತಹ ಮಕ್ಕಳ ಸಾಹಿತ್ಯ ಮಾಲೆಗಳನ್ನು ಪ್ರಕಟಿಸಿ ಮಕ್ಕಳಿಗೆ ಓದಲು ಸ್ಫೂರ್ತಿ ನೀಡುತ್ತಿರುವುದು ಶ್ಲಾಘನೀಯ.

ಒಟ್ಟಾರೆಯಾಗಿ ಸಂಗಮೇಶ ಗುಜಗೊಂಡರ ಗದ್ಯ ಸಾಹಿತ್ಯ ಅರ್ಥಪೂರ್ಣವಾಗಿ ಮೂಡಿ ಬಂದಿದೆ. ಇವರೊಬ್ಬ ಭರವಸೆಯ ಮಕ್ಕಳ ಕತೆಗಾರರಾಗುತ್ತಾರೆ ಎಂದು ಹೇಳಿದರೆ ತಪ್ಪಾಗಲಾರದು, ಇವರ ಅರ್ಥಪೂರ್ಣ ವಾಕ್ಯಗಳು ಕಥೆಗಾರಿಕೆಯ ಅಗ್ಗಳಿಕೆಗಳಿಗೆ ಸಾಕ್ಷಿಯಾಗಿ ನಿಂತಿವೆ. ಇವರ ಮಕ್ಕಳ ಸಾಹಿತ್ಯದ ಕಥಾ ಸಂಕಲನಗಳು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಮೆಚ್ಚುಗೆ ಪಡೆಯಲಿ ಎಂಬ ಸದಾಶಯದೊಂದಿಗೆ ಇವರ ಕೃತಿಗಳು ಇನ್ನೂ ಸಾಕಷ್ಟು ಅಧ್ಯಯನಕ್ಕೆ ಪೂರಕವಾಗಿ ನಿಂತಿವೆ.

* * * * *

# ಅಧ್ಯಾಯ : ಐದು

# ಸಂಗಮೇಶ ಗುಜಗೊಂಡರ ಸಾಹಿತ್ಯದ ವೈಶಿಷ್ಟ್ಯತೆ

**ಪ್ರವೇಶ:**

ಮಕ್ಕಳ ಸಾಹಿತ್ಯ ಸಮೃದ್ಧವಾಗಬೇಕು, ಆ ಸಾಹಿತ್ಯದಲ್ಲಿಯ ಮೌಲಿಕ ಚಿಂತನೆಗಳು ಮಕ್ಕಳಿಗೆ ಮುಟ್ಟಬೇಕು, ಮಕ್ಕಳ ಸರ್ವಾಂಗ ಸುಂದರ ವ್ಯಕ್ತಿತ್ವವನ್ನು ನಿರ್ಮಾಣಗೊಳ್ಳಬೇಕು, ಮಕ್ಕಳು ಭವಿಷ್ಯದ ಜವಾಬ್ದಾರಿಯುತ ಪ್ರಜೆಗಳಾಗಬೇಕು ಎಂಬ ಕಾಳಜಿ ಮಕ್ಕಳ ಸಾಹಿತ್ಯದ ರೂವಾರಿಗಳದ್ದು. ಮಕ್ಕಳಂತೆ ಮನಸ್ಸುಳ್ಳವರು ಮಾತ್ರ ಮಕ್ಕಳ ಸಾಹಿತ್ಯ ರಚಿಸಬಲ್ಲರು. ಅದರಲ್ಲೂ ಶಿಕ್ಷಕರು, ಪ್ರಾಧ್ಯಾಪಕರು ಹಾಗೂ ಮಕ್ಕಳು ಶಿಶು ಸಾಹಿತ್ಯದ ಬೇರುಗಳು. ನಾವು ಕೆಲವರನ್ನು ಪ್ರೀತಿಸುವುದಿಲ್ಲ. ಏಕೆಂದರೆ ಅವರನ್ನು ನಾವು ಅರ್ಥ ಮಾಡಿಕೊಂಡಿರುವುದಿಲ್ಲ. ಮತ್ತೆ ಕೆಲವರನ್ನು ನಾವು ಅರ್ಥ ಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ. ಏಕೆಂದರೆ ನಾವು ಅವರನ್ನು ಪ್ರೀತಿಸುವುದಿಲ್ಲ. ಆದರೆ ಸಂಗಮೇಶ ಗುಜಗೊಂಡರು ಎಲ್ಲರನ್ನೂ ಅರ್ಥಮಾಡಿಕೊಂಡವರು, ಎಲ್ಲರನ್ನೂ ಪ್ರೀತಿಸಿದವರು, ಅದರಲ್ಲೂ ಮಕ್ಕಳನ್ನು ಅತೀ ಹತ್ತಿರದಿಂದ ಪ್ರೀತಿಸಿದವರು. ಅವರ ಭಾವನೆಗಳನ್ನು ಅರಿತವರು. ಅಂತೆಯೇ ಅವರು ಮಕ್ಕಳ ಸಾಹಿತ್ಯ ರಚನೆಗೆ ಅರ್ಹರಾದವರು. ಕವಿಯ ಮನ ಹಲವು ಬಣ್ಣಗಳ ಹೂಗಳಿದ್ದ ಹಾಗೆ. ಹಲವು ಸಂಗತಿಗಳನ್ನು ಹಲವು ರೂಪದ ಭಾವಗಳು, ಸಾಮಾನ್ಯತೆಯಿಮದ ಅಸಾಮಾನ್ಯತೆಯವರೆಗಿನ ಅದ್ಭುತವಾದ ಶಕ್ತಿ ಮಕ್ಕಳ ಕವಿತೆಗಳಲ್ಲಿ ಮೂಡಿಸುವ ವಿಶಿಷ್ಟಗುಣ ಮಕ್ಕಳ ಸಾಹಿತ್ಯ ಬರೆಯುವವರದು. ಮಕ್ಕಳಿಗಾಗಿ ಬರೆಯುವದೆಂದರೆ ಜವಾಬ್ದಾರಿಯೂ ಅಷ್ಟೇ, ಸವಾಲಿನದೂ ಹೌದು. ಮಕ್ಕಳ ಮನೋಭಾವ ಅವರ ಆಸೆ, ಆಕಾಂಕ್ಷೆ ಹತ್ತಿರದಿಂದ ಕಂಡಾಗ ಅವರಂತೆಯೇ ಅನುಭವಿಸಿದಾಗ ಮಕ್ಕಳ ಸಾಹಿತ್ಯವೆನ್ನುವುದು ಹತ್ತಿರವಾಗುತ್ತದೆ. ಸ್ವತಃ ಪ್ರಾಧ್ಯಾಪಕರಾಗಿರುವ ಸಂಗಮೇಶ ಗುಜಗೊಂಡರು ಮಕ್ಕಳಂತೆಯೇ ಆಗಿ ಮಕ್ಕಳ ಮನೋಭಾವಗಳನ್ನು ತಮ್ಮ ಮಕ್ಕಳ ಸಾಹಿತ್ಯದಲ್ಲಿ ಹಿಡಿದಿಟ್ಟು ಯಶಸ್ವಿಯಾದವರು.

ಮಕ್ಕಳ ಸಾಹಿತ್ಯದ ಉದ್ದೇಶ ಇಂದಿನ ಮಕ್ಕಳನ್ನು ಸುಸಂಸ್ಕೃತರನ್ನಾಗಿಸುವುದು, ಮಕ್ಕಳ ಮನಸ್ಸು ಅರಳಿಸಿ ಹೊಸ ಚಿಂತನೆಗೆ ಒಳಪಡಿಸುವ ಅವರಲ್ಲಿ ಉತ್ಸಾಹ ತುಂಬಿ ಸಂತೋಷ ಕೊಡುವ ಮಕ್ಕಳ ಸಾಹಿತ್ಯವನ್ನು ರಚಿಸುವ ನಿಟ್ಟಿನಲ್ಲಿ ಸಂಗಮೇಶ ಗುಜಗೊಂಡರ ಕೊಡುಗೆ ವಿಶಿಷ್ಟವಾದುದು. ಈಗ ಪರಿಸರದಲ್ಲಿ ಉಂಟಾದ ತಾಂತ್ರಿಕ ಹಾಗೂ ಯಾಂತ್ರಿಕ ಚಟುವಟಿಕೆಗಳು ಹೆಚ್ಚಾಗಿವೆ. ಇದನ್ನು ಮಕ್ಕಳು ಹೇಗೆ ಎದುರಿಸುತ್ತಾರೆ. ಈ ವಾತಾವರಣದಲ್ಲಿ ಮಕ್ಕಳ ಮನದಲ್ಲಿ ಏನು ಮೂಡುತ್ತದೆ, ಎಂತಹ ಕುತೂಹಲ ಉಂಟಾಗುತ್ತದೆ ಎಂಬ ಪ್ರಶ್ನೆಗಳು ಉದ್ಭವಿಸುತ್ತವೆ. ಯಾಂತ್ರಿಕತೆಯಿಂದ ಮಾನವನ ಕೆಲಸದ ಅಗತ್ಯ ಕಡಿಮೆಯಾಗಿದೆ. ಇದು ಸರಿ ಆದರೆ ಈ ಪರಿಸ್ಥಿತಿಯಲ್ಲಿ ಮಕ್ಕಳ ಮನದ ಪ್ರಶ್ನೆಗಳಿಗೆ ಉತ್ತರ ನೀಡಬಲ್ಲ ಮಕ್ಕಳ ಸಾಹಿತ್ಯ ಬೇಕಾಗಿದೆ. ಮಕ್ಕಳು ಹಾಡು ಹೇಳಲಿ, ಕಥೆ ಹೇಳಲಿ,

ಮಾನವ ಇತಿಹಾಸ ಹೇಳಲಿ, ಇಂದಿನ ವ್ಯವಸ್ಥೆಗೆ ತಾಂತ್ರಿಕ ಜ್ಞಾನದೊಂದಿಗೆ ಯಾಂತ್ರಿಕ ಜ್ಞಾನ ಮಕ್ಕಳಿಗೆ ಅಗತ್ಯವಾಗಿ ಬೇಕು.

ಬರೆದದ್ದೆಲ್ಲ ಸಾಹಿತ್ಯವಾಗುವುದಿಲ್ಲ. ಮಕ್ಕಳ ಸಾಹಿತ್ಯರಚನೆ ಅಷ್ಟು ಸುಲಭ ಸಾಧ್ಯವಲ್ಲ. ತುಂಬಾ ಅರ್ಥಪೂರ್ಣವಾದ ಮೌಲ್ಯಗಳ ಸಾಹಿತ್ಯ ರಚಿಸಬೇಕು. ವಿಚಾರ ಸಂಕಿರಣಗಳಲ್ಲಿ ಭಾಗವಹಿಸುವಿಕೆ, ಹಿರಿಯ ಸಾಹಿತಿಗಳ ಸಾಹಿತ್ಯದ ಅಭ್ಯಾಸ ಮಾಡುವುದು, ಇವುಗಳ ಸಹಾಯದೊಂದಿಗೆ ಸಾಹಿತ್ಯದ ರಚನೆಯಾಗಬೇಕು. ಕೇವಲ ಪುಸ್ತಕ ಪ್ರಕಟಿಸುವದರಿಂದ ಯಾರೂ ಕವಿ-ಸಾಹಿತಿಯಾಗಲಾರರು ಎಂಬುದನ್ನು ಉದಯೋನ್ಮುಖ ಬರಹಗಾರರು ಮರೆಯಬಾರದು. ಉದಯೋನ್ಮುಖ ಬರಹಗಾರರು ಚೆನ್ನಾಗಿ ಓದಬೇಕು, ಅನುಭವ ಗಳಿಸಬೇಕು, ಬರೆಯುವ ರೂಢಿ ಮಾಡಿಕೊಳ್ಳಬೇಕು ಎಂಬ ಸಂದೇಶವನ್ನು ಸಂಗಮೇಶ ಗುಜಗೊಂಡರು ಒತ್ತಿ ಹೇಳಿದ್ದಾರೆ.

"ಭಾವಪರವಶತೆ, ಕನಸುಗಾರಿಕೆ, ಆದರ್ಶಪ್ರಿಯತೆ, ವಾತ್ಸಲ್ಯದ ಮನೋಭಾವ ಮೊದಲದವು ನವೋದಯ ಕಾಲಘಟ್ಟದ ಸಾಧನೆಯ ಆಕಾರಗಳಾಗಿ ಕಾಣುತ್ತವೆ. ಇದರ ಇನ್ನೊಂದು ಭಾಗ ಮಕ್ಕಳ ಸಾಹಿತ್ಯ. ಇಲ್ಲಿ ಕಥೆಗಳು, ಕವಿತೆಗಳು ಬೆಳಕು ಕಂಡವು. ಮಕ್ಕಳಿಗಾಗಿ ಹುಟ್ಟಿಕೊಂಡ ಸಾಹಿತ್ಯ ಎತ್ತರಕ್ಕೆ ಬೆಳೆದು ಉತ್ತರ ಕರ್ನಾಟಕದಲ್ಲಿ ಅದರಲ್ಲೂ ವಿಜಯಪುರ ಜಿಲ್ಲೆ ಮಕ್ಕಳ ಸಾಹಿತ್ಯದ ತವರು ಎನಿಸಿಕೊಂಡಿದೆ. ಇಲ್ಲಿ ಪ್ರಮುಖವಾಗಿ ಎದ್ದು ಕಾಣುವವರೆಂದರೆ ಶಿ.ಶು. ಸಂಗಮೇಶ, ಶಂ.ಗು. ಬಿರಾದಾರ, ಈಶ್ವಚಂದ್ರ ಚಿಂತಾಮಣಿ, ಹ.ಮ. ಪೂಜಾರ, ಫ.ಗು. ಸಿದ್ಧಾಪೂರ, ಚಂದ್ರಗೌಡ ಕುಲಕರ್ಣಿ, ಕಂಚಾಣಿ ಶರಣಪ್ಪ, ಸಂಗಮೇಶ ಬಾಗಲಕೋಟ ಹೇಳುತ್ತ ಹೋದರೆ ಹೀಗೆ ಸಾಲುಸಾಲಾಗಿ ಬೆಳೆಯುತಲಿದ್ದಾರೆ. ಅಂಥವರ ಸಾಲಿನಲ್ಲಿ ಸಂಗಮೇಶ ಗುಜಗೊಂಡರು ಒಬ್ಬರು. ಇವರು ತಮ್ಮ ಅನುಭಾವಗಳನ್ನು ಮಕ್ಕಳ ಸಾಹಿತ್ಯದ ಕೃತಿಗಳಲ್ಲಿ ವ್ಯಕ್ತಪಡಿಸಿದ್ದಾರೆ. ಗುಜಗೊಂಡರ ಕವಿತೆಗಳ ವಸ್ತು ವಿಷಯಗಳನ್ನು ಇಲ್ಲಿ ವಿಂಗಡಿಸಿ ನೋಡುವುದು ಅಷ್ಟು ಸುಲಭದ ಮಾತಲ್ಲ."[೨೪]

ಬಹುಶಃ ಜಗತ್ತಿನ ಮಕ್ಕಳ ಸಾಹಿತ್ಯದಲ್ಲಿ ಶೇಕಡಾ ಐವತ್ತರಷ್ಟು ಪ್ರಾಣಿಗಳಿಗೆ ಸಂಬಂಧಿಸಿದ ಇಲ್ಲಿ ಪ್ರಾಣಿಗಳೇ ಪಾತ್ರಗಳಾಗಿರುವ ಸಾಹಿತ್ಯ ಕಂಡುಬರುತ್ತದೆ. ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯದಲ್ಲಿ ನಿಸರ್ಗ, ಪರಿಸರದ ಕವಿತೆಗಳು, ನೀತಿಯ ಕವಿತೆಗಳು, ಪಶು-ಪಕ್ಷಿ ಪ್ರಾಣಿಗಳಿಗೆ ಸಂಬಂಧಿಸಿದ ಕವಿತೆಗಳು, ಭಾವಗೀತೆಗಳು, ದೇಶಭಕ್ತಿ ಗೀತೆಗಳು, ಇವರು ಬರೆದ ಕವಿತೆಗಳೆಲ್ಲವೂ ವೈವಿಧ್ಯಮಯವಾದವುಗಳು, ಇಲ್ಲಿ ಸಾಂಪ್ರದಾಯಿಕ ಕವಿತೆಗಳಿವೆ. ವಿಡಂಬನಾತ್ಮಕ ಕವಿತೆಗಳಿವೆ. ಅದಕ್ಕಾಗಿ ಇವರ ಕಾವ್ಯಗಳು ಸಮಗ್ರ ಅಧ್ಯಯನ ವ್ಯಾಪ್ತಿಗೆ ಒಳಪಡಿಸಬಹುದು.

---

[೨೪] ಪ್ರೊ. ಸಿದ್ಧಣ್ಣ ಉತ್ನಾಳ : ಸಿ.ಸು. ಸಂಗಮೇಶ ಆಯ್ದ ಮಕ್ಕಳ ಸಾಹಿತ್ಯ, ಪು. ೭

ದೇ. ಜವರೇಗೌಡರು ಇಲ್ಲಿ ಒಂದು ಮಾತು ಹೇಳಿದ್ದಾರೆ. ಒಂದು ದೇಶದ ಭವಿಷ್ಯ, ಅದರ ಹಿರಿಮೆ ಗರಿಮೆಗಳು, ಅದರ ಯಶಸ್ಸು ಶ್ರೇಯಸ್ಸುಗಳು ಅಲ್ಲಿಯ ಸುಶಿಕ್ಷಿತ ಜ್ಞಾನ ಸಂಪನ್ನಶೀಲವಂತ ಮಕ್ಕಳನ್ನು ಅವಲಂಬಿಸಿದೆಯೆಂಬುದು ಸಾರ್ವತ್ರಿಕ, ಸಾರ್ವಕಾಲಿಕ ಸತ್ಯ, ಸೌಶೀಲ್ಯ, ಸುಜ್ಞಾನ, ಸುಶಿಕ್ಷಣಗಳು ಸದ್ಗ್ರಂಥಗಳಿಂದ ಮಕ್ಕಳಿಗೆ ಲಭಿಸುತ್ತವೆ. ಮಕ್ಕಳ ಸಾಹಿತ್ಯದ ಅಗತ್ಯತೆ ನಮಗೆ ಅಷ್ಟರ ಮಟ್ಟಿಗೆ ಎಂದಿಗೂ ಇರುತ್ತದೆ. ಇಂದೂ ಇದೆ ಎಂದು ಹೇಳಿದ್ದಾರೆ. ಆ ನಿಟ್ಟಿನಲ್ಲಿ ಸಂಗಮೇಶ ಗುಜಗೊಂಡರು ತಮ್ಮ ಮಕ್ಕಳ ಸಾಹಿತ್ಯದ ಎಲ್ಲ ಬಗೆಯ ವಿಚಾರಗಳನ್ನು ಅನುಸರಿಸಿ ಅವರು ತಮ್ಮ ಕವಿತೆಗಳಲ್ಲಿ ಅಭಿವ್ಯಕ್ತಗೊಳಿಸಿದ್ದಾರೆ. ಮಾನವನ ಜೀವನದ ಸರ್ವತೋಮುಖ ಅಭಿವೃದ್ಧಿಗೆ ಮಕ್ಕಳ ಸಾಹಿತ್ಯ ಪೂರಕವಾಗಿದೆ ಎಂದು ಯುವಜನರಲ್ಲಿ ಈ ವಿಷಯದ ಕುರಿತು ತಮ್ಮ ಕೃತಿಗಳಲ್ಲಿ ಮಾರ್ಗದರ್ಶನ ಮಾಡಿದ್ದಾರೆ.

**ಸಂಗಮೇಶ ಗುಜಗೊಂಡರ ಕಾವ್ಯ ವಿಶ್ಲೇಷಣೆ:**

೧. ನಿಸರ್ಗ ಕವಿತೆಗಳು
೨. ದೇಶಾಭಿಮಾನದ ಕವಿತೆಗಳು
೩. ನೀತಿಯ ಕವಿತೆಗಳು
೪. ಅನುಭವಸಾರ ಕವಿತೆಗಳು
೫. ವಾತ್ಸಲ್ಯ ಕವಿತೆಗಳು
೬. ಸಾಂಪ್ರದಾಯಿಕ ಕವಿತೆಗಳು

**೧. ನಿಸರ್ಗ ಕವಿತೆಗಳು:**

ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯದಲ್ಲಿ ವೈವಿಧ್ಯತೆ ಕಾಣುತ್ತೇವೆ. ಯಾಕೆಂದರೆ ಅಲ್ಲಿ ವಿವಿಧತೆಯ ಕೆಲವು ಆಯಾಮಗಳು ಕಾಣುತ್ತೇವೆ. ಮಕ್ಕಳ ಸಾಹಿತ್ಯದಲ್ಲಿ 'ಸಹಬಾಳ್ವೆಯ ಗುಣವಿರಬೇಕು, ಬಾಲ್ಯಾವಸ್ಥೆಯಲ್ಲಿ ಕಂಡುಂಡ ವಸ್ತುಗಳಾದ ಭೂಮಿ, ಬಾನು, ಚಂದಿರ, ಮಳೆ, ಬೆಳ್ಳಿ, ಹಕ್ಕಿ ಹೀಗೆ ಹಲವಾರು ವಸ್ತುಗಳ ಮುಖೇನ ಮಕ್ಕಳ ಮನಸ್ಸು ವಿಕಾಸವಾಗುವಂತೆ ಮಾಡಬೇಕು. ಕರಡಿ, ಗಿಳಿ, ಕುದುರೆ, ಆನೆ ಹಲವು ಪ್ರಾಣಿ ಪಾತ್ರಗಳ ಮಾತಿನ ಮಕ್ಕಳ ಯೋಚನಾ ಲಹರಿಯನ್ನು ವಿಸ್ತರಿಸಬಹುದು.

'ಎಲ್ಲೆಡೆ ಒತ್ತಿದೆ
ಹಸಿರಿನ ಛಾಪು
ಅಜ್ಜನ ತೋಟವೆ ನಂದನವು
ಸವಿ ಸವಿ ಹಣ್ಣನು
ರುಚಿ ರುಚಿನ ಹೈನವ
ನಿತ್ಯವು ಕೊಡುತಿಹ ಗೋಕುಲವು

ಜುಳು ಜುಳು ಹರಿಯುವ
ಕಾಲುವೆ ನೀರಲಿ
ಗೆಜ್ಜೆಯ ಉಲಿಯು ಕೇಳುವುದು
ಚಿಲಿಪಿಲಿ ಗುಟ್ಟುವ
ಹಕ್ಕಿಯ ಹಾಡಲಿ
ಮಧುರ ರಾಗವು ಮಿಡಿಯವುದು'[೨೫]

ನಿಸರ್ಗದ ಮಡಿಲಲ್ಲಿ ಜನಿಸಿದ ಸಂಗಮೇಶ ಗುಜಗೊಂಡರು ಗ್ರಾಮೀಣ ಪ್ರದೇಶದಲ್ಲಿ ಬೆಳೆದು ಬಂದವರು. ಪ್ರಾಣಿ–ಪಕ್ಷಿಗಳ, ಗಿಡ–ಮರಗಳ, ಹಳ್ಳ–ಕೊಳ್ಳಗಳ, ಮಳೆ ಮೋಡಗಳ, ಸೂರ್ಯ–ಚಂದ್ರರ ಸೃಷ್ಟಿಯ ವೈಚಿತ್ರ್ಯಗಳನ್ನು ಪ್ರಾಣಿ–ಪಕ್ಷಿಗಳ ಮಧುರ ಭಾವನೆಗಳು, ಮಕ್ಕಳ ಆಲೋಚನೆಗಳು ಅವರ ಕವಿತೆಗಳಲ್ಲಿ ಸೆರೆ ಹಿಡಿದಿದ್ದಾರೆ.

ಹಚ್ಚ ಹಸುರಾದ ಹುಲ್ಲಿನ ಹಾಸಿಗೆಯಂತಿರುವ ಅಜ್ಜನ ತೋಟ ನಿಜಕ್ಕೂ ನಂದನವನವಾಗಿದೆ. ಈ ಬನದಲ್ಲಿ ರುಚಿರುಚಿಯಾದ ಹಣ್ಣಿನ ಮರಗಳಿವೆ. ಬದಿಗೆ ತಿಳಿಯಾಗಿ ಜುಳು ಜುಳು ಹರಿಯುವ ನೀರಿನ ಕಾಲುವೆ ಇದೆ. ಕಾಲುವೆಯಲ್ಲಿ ಮಕ್ಕಳು ಓಡಾಡುವಾಗ ಕಾಲಿನ ಗೆಜ್ಜೆಯ ನಾದ ಘಲ್‌ಘಲ್ ಎಂದು ಕೇಳಿಸುವುದು, ಮರದಲಿ ಚಿಲಿಪಿಲಿಗುಟ್ಟುವ ಹಕ್ಕಿಗಳ ಕಲರವ ನಾದ, ಝೇಂಕಾರ ಕಿವಿಗೆ ಇಂಪಾಗಿ ಕೇಳಿಸುವುದು. ಗುಬ್ಬಚ್ಚಿಗಳ ಕಿಲಕಿಲ ಸದ್ದು ಕೋಗಿಲೆಯ ಮಧುರರಾಗ ಇವೆಲ್ಲವೂ ಅಜ್ಜನ ತೋಟದಲ್ಲಿ ಮೇಳೈಸಿವೆ. ಇಲ್ಲಿ ಪರಿಸರದ ಬಗ್ಗೆ, ಪಕ್ಷಿಗಳ ಬಗ್ಗೆ ಗುಜಗೊಂಡರು ಮನಸಾರೆ ಹಾಡಿ ಹೊಗಳಿದ್ದಾರೆ.

'ಹಿರಿಯರು ಕಿರಿಯರು
ಶಾಲೆಯ ಹುಡುಗರು
ವಾರಕೆ ಒಂದಿನ ಕೂಡುವೆವು
ಕೆರೆಯ ಪಕ್ಕದ
ಊರಿನ ಬಯಲಲಿ
ವನ ನಿರ್ಮಾಣಕೆ ದುಡಿಯುವೆವು
ಉತ್ತಮ ಪರಿಸರ
ಊರಿಗೆ ಒದಗಿಸಿ
ಜೀವನವಿಡಿ ಉಳಿಸುವೆವು'

ಸ್ವಚ್ಛವಾದ ಪರಿಸರವಿರದಿದ್ದರೆ ಜೀವಿಗಳಿಗೆ ನೆಲೆಯಿಲ್ಲ. ಊರು–ಕೇರಿಗಳಲ್ಲಿ ಹಳ್ಳ–ಕೊಳ್ಳಗಳಿರಬೇಕು. ಗಿಡ–ಮರ ಬಳ್ಳಿಗಳಿರಬೇಕು. ಉತ್ತಮ ಪರಿಸರವಿದ್ದಾಗ ಮಾತ್ರ ಮಳೆ

[೨೫] ಸಂಗಮೇಶ ಗುಜಗೊಂಡ, ಅಮ್ಮಾ ಕೇಳೆ, ಪು. ೧೦.

ಬರುವುದು. ಹಳ್ಳ-ಕೊಳ್ಳಗಳು ತುಂಬುವದು, ಪ್ರತಿ ಜೀವಿಗಳಿಗೆ ನೀರು ಜೀವನಾಧಾರ. ಸಮೃದ್ಧವಾದ ಮಳೆ ಬರಬೇಕಾದರೆ ನಾವು ಗಿಡಗಳನ್ನು ಬೆಳೆಸಬೇಕು. ಉತ್ತಮ ಪರಿಸರಕ್ಕಾಗಿ ನಾವೆಲ್ಲರೂ ದುಡಿಯಬೇಕು. ಉತ್ತಮ ಪರಿಸರವಿದ್ದರೆ ಊರಿಗೆ ಅಂದ ಚಂದ.

ಮಕ್ಕಳು ಸುತ್ತಲಿನ ಪ್ರಕೃತಿ, ಪರಿಸರ, ಗಿಡಮರಗಳು, ಪ್ರಾಣಿ ಪಕ್ಷಿಗಳನ್ನು ಗಮನಿಸಬೇಕು. ಅವುಗಳಲ್ಲಿ ಕುತೂಹಲ, ಆಸಕ್ತಿ ಹೆಚ್ಚಿಸಿಕೊಳ್ಳಬೇಕು ಎಂಬುದೇ ಕವಿಯ ಆಶಯವಾಗಿದೆ.

'ಭೂಮಿ ತುಂಬ
ಹಸಿರೆ ಹಸಿರು
ಇದುವೆ ಭವ್ಯ ನಂದನ
ಸ್ವಚ್ಛಗಾಳಿ ಶುದ್ಧನೀರು
ಚಂದ ಇಲ್ಲಿ ಜೀವನ
ಬೆಟ್ಟ ಏರಿ
ನೋಡಲೂರು
ಸ್ವರ್ಗದಷ್ಟು ಸುಂದರ'

ಮಳೆಗಾಲದ ದೃಶ್ಯ ಎಲ್ಲರಿಗೂ ಹಿತವನು ನೀಡುತ್ತದೆ. ಮರಗಳಿಲ್ಲದ ಬರಡು ಭೂಮಿಗೆ ಮಳೆ ಸುರಿದಾಗ ಭೂಮಿ ತುಂಬ ಹಸಿರು, ಎಲ್ಲಿ ನೋಡಿದರಲ್ಲಿ ಹಸಿರು ನೆಲ, ಕಣ್ಣಿಗೆ ನೋಡಲು ಎಷ್ಟೊಂದು ಆನಂದ, ಭೂಮಿ ಸ್ವರ್ಗದಂತೆ ಕಾಣುತ್ತದೆ. ಹಸಿರಿನಿಂದ ಕಂಗೊಳಿಸಿ ನಂದನವನವಾಗಿದೆ. ಮಳೆಯಿಂದ ಹಳ್ಳಕೊಳ್ಳಗಳು ತುಂಬಿ ಹರಿಯುತ್ತವೆ. ಪ್ರಾಣಿ-ಪಕ್ಷಿಗಳಿಗೆ ಜೀವಕಳೆ ಬರುತ್ತವೆ. ಸ್ವಚ್ಛ ಪರಿಸರದಿಂದ ಶುದ್ಧವಾದ ಗಾಳಿ ಬೀಸುತ್ತದೆ. ಪರಿಸರ ಆರೋಗ್ಯಕರವಾಗಿರುತ್ತದೆ. ಊರಿನ ಸುತ್ತಲೂ ಬೆಟ್ಟ-ಗುಡ್ಡಗಳು, ಜುಳು-ಜುಳು ನೀರು ಹರಿಯುವ ಕಾಲುವೆ ಬೆಟ್ಟ ಏರಿ ನಿಂತಿ ನನ್ನೂರು ನೋಡಲು ಎಷ್ಟೊಂದು ಸುಂದರ ಈ ಸ್ವಚ್ಛಂದ ಪರಿಸರ ನೋಡಿ ಗಗನದಲಿರುವ ಚಂದಿರನು ಧರೆಗಿಳಿದು ಬರುವನು ಎಂಬ ಮಾತು ಈ ಕವಿತೆಯಲ್ಲಿ ಕವಿ ವರ್ಣಿಸಿದ್ದಾರೆ.

'ಅಣ್ಣನ ಸಂಗಡ ಹಿತ್ತಲ ತೋಟದಿ
ಅನುದಿನ ನಾನು ದುಡಿಯುವೆನು
ಬಗೆಬಗೆ ಸಸಿಗಳ ಪೋಷಣೆ ಮಾಡುತ
ಹೊಸ ಹೊಸ ಸಸಿಗಳ ನೆಟ್ಟಿಹೆನು
ಮಣ್ಣಿನ ಶಕ್ತಿಗೆ ಗೊಬ್ಬರ ಬೆರೆಸುತ
ಅಧಿಕ ಬಲವನು ನೀಡುವೆನು
ಕಾಲಕೆ ಕಾಲಕೆ ಕಳೆಯನು ಕೀಳುತ
ಸಸಿಗಳ ರಕ್ಷಣೆ ಮಾಡುವೆನು...'

ಸಂಗಮೇಶ ಗುಜಗೊಂಡರು ಗ್ರಾಮೀಣ ಪ್ರದೇಶದಲ್ಲಿ ಹುಟ್ಟಿ ಬೆಳೆದವರು, ಪ್ರಕೃತಿಯ ಮಡಿಲಲ್ಲಿ ಬದುಕು ಸಾಗಿಸಿದವರು, ಪರಿಸರ ಪ್ರೇಮವನ್ನು ಈ ಕವಿತೆಯ ಮುಖಾಂತರ ತಿಳಿಸಿದ್ದಾರೆ. ಮನೆಯ ಹಿತ್ತಲದಲ್ಲಿ ಸಣ್ಣದೊಂದು ತೋಟ ಮಾಡಿ ತರತರ ಸಸಿಗಳನ್ನು ಹಚ್ಚಿ ಮಣ್ಣಿಗೆ ನೀರು ಗೊಬ್ಬರ ಹಾಕಿ ಅಣ್ಣನಿಗೆ ಸಹಯ ಮಾಡುತ ಸಸಿಗಳ ಮಧ್ಯ ಬೆಳೆದ ಹುಲ್ಲನು ಕಿತ್ತಿ ನೆಲವನು ಹದ ಮಾಡಿ ಸಸಿಗಳ ರಕ್ಷಣೆ ಮಾಡುತ ಮನೆಗೊಂದು ಮರ ಬೆಳೆಸಿ ಕಾಡು ಉಳಿಸಿ ಎಂಬ ಧ್ಯೇಯವನ್ನು ಈ ಕವಿತೆ ಸಾರಿ ಹೇಳುತ್ತದೆ.

**೨. ದೇಶಾಭಿಮಾನದ ಕವಿತೆಗಳು:**

ಶಿಶು ಸಾಹಿತ್ಯದ ಭಾಷೆ ಸರಳವಾಗಿದೆ ಮತ್ತು ಭಾವಪೂರ್ಣವಾಗಿದೆ. ಒಂದೊಂದು ಮೌಲ್ಯ ಆದರ್ಶ ನೀಡಲೆಂದು ಸಂಗಮೇಶ ಗುಜಗೊಂಡ ಅವರು ತಮ್ಮ ಕವಿತೆಗಳಲ್ಲಿ ದೇಶಾಭಿಮಾನ, ಸ್ವಾಭಿಮಾನ, ಪರೋಪಕಾರ, ವಿಶ್ವಮಾನವತೆ ಬೆಳೆಸಿಕೊಳ್ಳುವಿಕೆ, ಮಾನವೀಯ ವೈಜ್ಞಾನಿಕ ಮನೋಭಾವ, ಒಳ್ಳೆಯ ಗುಣ, ಸ್ವಬಾವ, ವಿಚಾರಗಳು, ಮಕ್ಕಳಲ್ಲಿ ಬೆಳೆದು ಬರಲೆಂಬ ಆಶಯದಿಂದ ದೇಶಾಭಿಮಾನ ಬೆಳಸಿಕೊಳ್ಳುವ ಕವಿತೆಗಳನ್ನು ರಚಿಸಿದ್ದಾರೆ.

'ಜನ್ಮ ತಾಯಿ ಭಾರತಿ ಬೆಳಗುತಿಹೆವು ಆರತಿ
ಜಗದಲ್ಲಿ ನಿನಗಿಹುದು ಹಿರಿಯದಾದ ಕೀರುತಿ
ವಿವಿಧ ಭಾಷೆ ಜಾತಿಮತದ ಜನರು ಇರುವೆವು
ನಿನ್ನ ಪ್ರೀತಿ ಮಮತೆಯಲ್ಲಿ ಬದುಕುತಿರುವೆವು...
ಯಾವ ತರದ ಭೇದ ಭಾವ ಇಲ್ಲ ನಮ್ಮೊಳು
ದಿವ್ಯ ನೀತಿ ಮೆರೆವ ದೇಶ ಇದುವೆ ಜಗದೊಳು'

ಈ ಕವನದಲ್ಲಿ ಭಾರತ ದೇಶವನ್ನು ಮನೆಗೆ ಹೋಲಿಸಲಾಗಿದೆ. ಮನೆಯಲ್ಲಿ ನಾವೆಲ್ಲರೂ ಕೂಡಿ ಬಾಳುವಂತೆ ಭಾರತದಲ್ಲಿಯೂ ನಾವೆಲ್ಲರೂ ಕೂಡಿ ಬಾಳಬೇಕು. ಸಂಗಮೇಶ ಗುಜಗೊಂಡರು ದೇಶಾಭಿಮಾನದ ಕವಿತೆಗಳಲ್ಲಿ ಮಕ್ಕಳಲ್ಲಿ ಭಾವೈಕ್ಯತೆಯ ಮನೋಭಾವನೆ ಮೂಡುವಂತೆ ಮಾಡಲಾಗಿದೆ. ಈ ಕವನದಲ್ಲಿ ಅವಿಭಕ್ತ ಕುಟುಂಬ ಮೌಲ್ಯಗಳ ಕುರಿತು ಹೇಳಲಾಗಿದೆ. ಇಲ್ಲಿ ಯಾವುದೇ ಜಾತಿ ಭೇದವಿಲ್ಲ. ನಮ್ಮಲ್ಲಿ ಪ್ರೀತಿ ಇದೆ. ಕರುಣೆ ಇದೆ. ಕೂಡಿ ಬಾಳಿದರೆ ಸ್ವರ್ಗಸುಖ ಎಂಬ ಸಂದೇಶವೂ ಈ ಕವನದಲ್ಲಿದೆ.

'ನಾವು ಎಲ್ಲರೂ ಒಂದು
ನಾವು ಎಲ್ಲರು ಬಂಧು
ನಾವು ಭಾರತೀಯರು, ನಾವು ಭಾರತೀಯರು
ಹಿಂದು ಮುಸಲ್ಮಾನ

ಕ್ರೈಸ್ತ ಬೌದ್ಧ ಜೈನ
ಪಾರ್ಸಿ ಶಿಖ್ ಇಸಾಯಿ
ಭಾರತ ನಮಗೆ ತಾಯಿ
ನಾವು ಭಾರತೀಯರು ನಾವು ಭಾರತೀಯರು
ನಾವು ಎಲ್ಲರು ಒಂದು
ನಮ್ಮ ಶಕ್ತಿಯು ಒಂದು...'[೨೬]

ಎಂಬ ಈ ಕವಿತೆಯಲ್ಲಿ ನಾವು ಪುಟ್ಟ ಮಕ್ಕಳಾದರೂ ನಾವು ದಿಟ್ಟ ಹೆಜ್ಜೆಗಳನ್ನಿಟ್ಟು ಭಾರತ ಮಾತೆಗೆ ಜಯಘೋಷ ಹಾಕುವ ವೀರ ಪುರುಷರಂತೆ ನಾವು ಬಾಳುವೆವು ಎಂಬ ಮಾತು ಮಕ್ಕಳು ಧೈರ್ಯದಿಂದ ಹೇಳುವ ಒಗ್ಗಟ್ಟಿನ ಶಕ್ತಿ ಈ ಕವಿತೆಯಲ್ಲಿ ತೋರಿಸಿಕೊಟ್ಟಿದ್ದಾರೆ. ನಾವು ಎಲ್ಲರು ಒಂದು ನಮ್ಮ ಶಕ್ತಿಯು ಒಂದು ಎಂಬ ಮಾತಿನಲ್ಲಿ ವಿಶ್ವದ ಜನರೆಲ್ಲ ನಮ್ಮ ಬಂಧುಗಳು, ಅವರ ಯಾವುದೇ ಭಾಷೆಯವರಾಗಲಿ, ಯಾವುದೇ ಜಾತಿಯವರಾಗಲಿ, ಅವರೆಲ್ಲರೂ ನಮ್ಮ ಬಂಧುಗಳು ಎಲ್ಲರೂ ಭಾರತಮಾತೆಯ ಮಕ್ಕಳು ನಾವು ಭಾರತೀಯರು ಎಲ್ಲರೂ ಅಪ್ಪಿಕೊಂಡು ಬದುಕೋಣ ಎಂಬ ಸಂದೇಶ ಈ ಕವಿತೆಯಲ್ಲಿ ಅಡಗಿದೆ.

'ದೇಶದ ದಾಸ್ಯವು
ಕಳೆಯಲು ಅನುದಿನ
ಗಾಂಧಿಯ ಜತೆಯಲಿ ಶ್ರಮಪಟ್ಟ
ಪ್ರಧಾನಿ ಹುದ್ದೆಯ
ಹೊಣೆಯನು ಹೊತ್ತು
ದೇಶಕೆ ಚೈತನ್ಯ ತಂದುಕೊಟ್ಟ...
ನೆಹರು ಕನಸು
ಸಾಕಾರಗೊಳಿಸುತ
ದೇಶವ ಕಟ್ಟುವ ಗಟ್ಟಿಮುಟ್ಟ॥'

ಇಲ್ಲಿಯ ಕವಿತೆಯ ಸಾಲುಗಳಲ್ಲಿ ಗಾಂಧಿ, ನೆಹರು ಅವರ ನಿಸ್ವಾರ್ಥದಿಂದ ಜನಸೇವೆ ಮಾಡಿದ ಕುರಿತು ತಿಳಿಸಲಾಗಿದೆ. ಜನಸೇವೆಯೇ ದೇಶಸೇವೆ, ಅದುವೆ ಈಶಸೇವೆ. ಭಾರತ ದೇಶ ಒಂದುಗೂಡಿಸಿ, ಗಟ್ಟಿಮುಟ್ಟಾಗಿ ಕಟ್ಟುವ ಕೆಲಸ ಗಾಂಧಿ, ನೆಹರೂ ಮಾಡಿದ್ದಾರೆ ಎಂಬ ನೀತಿಯ ನುಡಿಗಳು ಈ ಕವಿತೆಯಲ್ಲಿವೆ. ಗಾಂಧಿ, ನೆಹರು ಅವರ ಕನಸು ಸಾಕಾರಗೊಳಿಸುವುದರೊಂದಿಗೆ ಭಾರತವು ಹಳ್ಳಿಗಳ ದೇಶ, ಹಳ್ಳಿಗಳೆಲ್ಲ ಸುಧಾರಿಸಿದರೆ ದೇಶ ತಾನೆ ಪ್ರಗತಿ ಸಾಧಿಸುವುದು ಎಂಬ ಮಾತು ಸಂಗಮೇಶ ಗುಜಗೊಂಡರು ಈ ಕವನದ ಮೂಲಕ ತಿಳಿಸಿದ್ದಾರೆ.

[೨೬] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೩೭.

'ಜನ್ಮಭೂಮಿ ಪುಣ್ಯತಾಣ
ದೇಶಪ್ರೇಮ ನಮ್ಮ ಪ್ರಾಣ
ನಾಡ ಚೆಲುವು ನಮ್ಮ ಗೆಲುವು
ನಮ್ಮ ನಗೆಯೆ ನಾಡ ಬಲವು
ಒಂದೇ ಎಂಬುದು ನಮ್ಮ ಮಂತ್ರ
ನಾಡಿನೇಳ್ಗೆಯೆ ಬದುಕಿನ ತಂತ್ರ...'

ಸಂಗಮೇಶ ಗುಜಗೊಂಡರು ಇಲ್ಲಿಯ ಕವಿತೆಯ ಸಾಲುಗಳಲ್ಲಿ ನಾವೆಲ್ಲರು ಒಂದೇ ತಾಯ ಮಕ್ಕಳು. ಜಾತಿಭೇದ ತೊಡೆದು ಹಾಕಿ ಒಂದುಗೂಡಿ ಬಾಳಿದರೆ ಅದುವೆ ನಾಡಿನ ಏಳಿಗೆ. ನಾವೆಲ್ಲರೂ ವಿದ್ಯಾವಂತರಾಗೋಣ, ಭಾರತ ಮಾತೆಯ ಹೆಮ್ಮೆಯ ಪುತ್ರರಾಗೋಣ. ಪ್ರಜಾಪ್ರಭುತ್ವವನ್ನು ಎತ್ತಿ ಹಿಡಿದು ಗೌರವದಿಂದ ಬಾಳೋಣ. ನಮ್ಮ ದೇಶ, ಸತ್ಯ, ಶಾಂತಿ, ಅಹಿಂಸೆಗಳ ನೆಲೆವೀಡು, ಯಾವುದೇ ಮತಭೇದವಿಲ್ಲದೆ ನಾವಿಲ್ಲಿ ಬಾಳುತ್ತೇವೆ. ಒಗ್ಗಟ್ಟಿನಿಂದ ದೇಶಕ್ಕಾಗಿ ದುಡಿಯುತ್ತೇವೆ. ದೇಶಕ್ಕೆ ಬಲವು ತಂದುಕೊಡುತ್ತೇವೆ. ನಗೆಯು ಬೀರಿ ಬದುಕಿನ ತಂತ್ರವನ್ನು ಹೆಣೆಯುತ್ತೇವೆ. ಮಾನವೀಯ ಮೌಲ್ಯಗಳನ್ನು ತುಂಬುತ್ತೇವೆ. ಕವಿಯು ಭಾರತಾಂಬೆಯ ಬಗ್ಗೆ ಒಗ್ಗಟ್ಟಿನ ಬಲದ ಬಗ್ಗೆ ಈ ಕವಿತೆಯಲ್ಲಿ ಬಣ್ಣಿಸಿದ್ದಾರೆ.

**೩. ನೀತಿಯ ಕವಿತೆಗಳು :**

'ಮಕ್ಕಳ ಸಾಹಿತ್ಯ' ಮುಖ್ಯವಾಗಿ ಮಾನವೀಯ ಸಂಗತಿಗಳನ್ನು ಒಳಗೊಂಡಿರಬೇಕು. ನೀತಿ, ಮೌಲ್ಯ, ಆದರ್ಶಗಳನ್ನು ಅರ್ಥ ಮಾಡಿಕೊಳ್ಳುವಷ್ಟು ಸಾಮರ್ಥ್ಯ ಮಕ್ಕಳಿಗೆ ಕಡಿಮೆ ಎಂದೇ ಹೇಳಬೇಕು. ವಯಸ್ಸಿಗನುಗುಣವಾಗಿ ಮಕ್ಕಳಿಗೆ ಹೊಸ ಹೊಸ ಸಂಗತಿಗಳನ್ನು ನೀಡಿದರೆ ಒಳ್ಳೆಯದು. ಮಕ್ಕಳ ಮಾನಸಿಕ ಹಾಗೂ ಬೌದ್ಧಿಕ ಮಟ್ಟವನ್ನು ಗಮನದಲ್ಲಿಟ್ಟುಕೊಂಡು ಸಾಹಿತ್ಯ ರಚಿಸುವುದು ಹೆಚ್ಚು ಸೂಕ್ತ. 'ಕಾಯಕದಲ್ಲಿ ನಿರತನಾದರೆ ಗುರುವನ್ನು ಮರೆಯಬೇಕು' ಎಂಬ ಶರಣರ ವಾಣಿಯಂತೆ ಮನೆಯಲ್ಲಿ, ಶಾಲೆಯಲ್ಲಿ ಸುತ್ತಮುತ್ತಲ ಪರಿಸರದಲ್ಲಿ ಸ್ವಾರ್ಥ ಬಯಸದೆ ನಿಸ್ವಾರ್ಥದಿಂದ ಸಂತಸದ ಕೆಲಸವನ್ನು ಮಾಡಿ ಆಶೆಯನ್ನು ಮಾಡದವನು ಶ್ರೇಷ್ಠ. ಸಾಮಾಜಿಕವಾಗಿ, ನೈತಿಕವಾಗಿ ಇಂತಹ ಹಲವಾರು ವೈಶಿಷ್ಟ್ಯತೆಗಳು ಸಂಗಮೇಶ ಗುಜಗೊಂಡರ ಕವಿತೆಗಳಲ್ಲಿ ಕಾಣುತ್ತೇವೆ.

'ಗುರುಗಳು ತೋರುವ ಅಕ್ಕರೆ ಮಮತೆಯು
ವಿದ್ಯೆಯ ಒಲವನು ಬೆಳೆಸುವುದು
ವಿವಿಧ ವಿಷಯದ ಪರಿಪರಿ ಬೋಧನೆ
ಜ್ಞಾನದ ಸೌಧವ ಕಟ್ಟುವದು'

ಮಕ್ಕಳಲ್ಲಿ ಸ್ವಾಭಿಮಾನ, ಆದರ್ಶ ಮೌಲ್ಯಗಳು ಒಳ್ಳೆಯ ಗುಣ-ಸ್ವಭಾವ, ವಿಚಾರಗಳು, ಮಕ್ಕಳಲ್ಲಿ ಬೆಳೆದು ಬರಲೆಂಬ ಗುರುಗಳ ಆಶಯ ಈ ಕವಿತೆಯಲ್ಲಿ ಮೂಡಿದೆ.

ಮಕ್ಕಳ ವ್ಯಕ್ತಿತ್ವ ನಿರ್ಮಾಣದಲ್ಲಿ ಶಾಲೆಯ ಪಾತ್ರ ಬಹಳ ಮುಖ್ಯವಾಗಿದೆ. ನಾಲ್ಕು ಗೋಡೆಗಳ ಮಧ್ಯ ಹಲವು ವಿಷಯಗಳನ್ನು ಕಲಿತು ಜ್ಞಾನದ ಸೌಧವ ಕಟ್ಟುವ, ಕಾಯಕ ಶಿಲ್ಪಿಗಳಾಗಿ ಜೊತೆಗೆ ಭಾಷಾ ಕೌಶಲ್ಯ ಬೆಳೆಸಿಕೊಳ್ಳುವ ರಾಷ್ಟ್ರದ ಅಭಿವೃದ್ಧಿಯ ಹರಿಕಾರರಾಗುವರು.

'ಪುಟ್ಟ ಸಸಿಯ ನೆಟ್ಟು ಕಿಟ್ಟ
ಹರುಷ ತಾನು ಪಟ್ಟನು
ಮೇಲೆ ಗೊಬ್ಬರವ ಹಾಕಿ
ಸುತ್ತ ಬೇಲಿ ಇಟ್ಟನು'[೨೭]

ಈ ಕವಿತೆಯಲ್ಲಿ ಪರಿಸರದ ಪ್ರಜ್ಞೆ ಬೆಳೆಸುವ ನಿಟ್ಟಿನಲ್ಲಿ ಮಕ್ಕಳಲ್ಲಿ ಗಿಡ-ಮರಗಳು ಬೆಳೆಸುವುದರಿಂದ ಪರಿಸರ ಸುಂದರವಾಗುತ್ತದೆ. ನಿಸರ್ಗದ ಪ್ರತಿ ಜೀವಿಗಳಿಗೆ ಒಳ್ಳೆಯ ಗಾಳಿ, ಆಹಾರ, ನೀರು ಇದ್ದರೆ ಮಾತ್ರ, ಆರೋಗ್ಯವಂತರಾಗಿರಲು ಸಾಧ್ಯ. ಪ್ರಕೃತಿಯ ಮಡಿಲಲ್ಲಿ ಜನಿಸಿದ ನಾವೆಲ್ಲರು ಮನೆಗೊಂದು ಮರವನ್ನು ಬೆಳೆಸಿದರೆ ಕಾಡು ಬೆಳೆಯುತ್ತದೆ. ನಾಡು ಸಮೃದ್ಧಿಯಾಗುತ್ತದೆ ಎನ್ನುವ ನೀತಿಯ ಆಲೋಚನೆಗಳು ಸಂಗಮೇಶ ಗುಜಗೊಂಡರು ಮಕ್ಕಳಿಗಾಗಿ ಇಂತಹ ಕವಿತೆಗಳನ್ನು ರಚಿಸಿದ್ದಾರೆ.

'ಅನುದಿನ ಅಜ್ಜನು ಗೊಣಗುವ ಮಾತಿದು
ಸತ್ಯವ ಅಡಗಿದೆ ಅದರಲ್ಲಿ
ಕೆಲವ ಮರೆಯುತ ವೇಳೆಯ ಕಳೆವರು
ಮನೆಯವರೆಲ್ಲ ಟಿ.ವಿ. ಬಳಿ

ಹಿತ್ತಲ ತೋಟದ ಕಾಳಜಿ ಅಳಿದಿದೆ
ಬಾಡಿವೆ ಸಸಿಗಳು ಅಲ್ಲಲ್ಲಿ
ಟಾಮಿಗೆ, ಕಾಮಿಗೆ ಊಟವು ತಪ್ಪುತ
ಸೊರಗಿವೆ ನಾಲಿಗೆ ಹೊರಚೆಲ್ಲಿ'

ಈ ಕವಿತೆಯಲ್ಲಿ ಎಂದಿಗೂ ಹಿರಿಯರು ಹೇಳುವ ಮಾತು ಸತ್ಯವಾಗಿರುತ್ತದೆ. ಮನೆಯಲ್ಲಿ ಅಜ್ಜ ಅಜ್ಜಿಯರು ಇದ್ದರೆ ಮನೆಯಲ್ಲಿ ಗೌರವ, ಪ್ರೀತಿ, ಒಳ್ಳೆಯ ಮಾತುಗಳು, ತುಂಬಿಕೊಂಡಿರುತ್ತವೆ. ಅಜ್ಜ-ಅಜ್ಜಿಯರು ಹೇಳುವ ಮಾತುಗಳು ನಮ್ಮ ಬದುಕಿಗೆ ದಾರಿ ದೀಪವಾಗಿವೆ. ನಾವು ಹಿರಿಯರ ಮಾತು ಮೀರಬಾರದು, ಅವರ ಮಾತು ಗೌರವಿಸಬೇಕು, ನಾವು ಟಿ.ವಿ. ನೋಡುತ್ತಾ ಕಾಲಹರಣ ಮಾಡಿದರೆ ಹಿತ್ತಲಲ್ಲಿ ಬೆಳೆಸಿದ ಸಸಿಗಳು ಬಾಡಿ ಹೋಗುತ್ತವೆ. ಸಾಕಿದ ಮುದ್ದಿನ ಪ್ರಾಣಿಗಳು ಸೊರಗಿ ಹೋಗುತ್ತವೆ. ಅವುಗಳ ಬಗ್ಗೆ ನಾವು ಕಾಳಜಿ ವಹಿಸಬೇಕು, ಒಳ್ಳೆಯ ಗುಣಗಳನ್ನು ಅಳವಡಿಸಿಕೊಂಡು ನಿಸ್ವಾರ್ಥದಿಂದ ಬದುಕಬೇಕು. ಪ್ರಾಣಿ ಪಕ್ಷಿಗಳನ್ನು ಪ್ರೀತಿಯಿಂದ ನೋಡಿಕೊಳ್ಳಬೇಕು, ದೊಡ್ಡವರ

---

[೨೭] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೩೫.

ಮಾತುಗಳನ್ನು ಗೌರವಿಸುತ್ತ ಬದುಕಿನ ಹಾದಿಯನ್ನು ಸವೆಸಲು ಯುಕ್ತಿ ಅವಶ್ಯಕ ಎನ್ನುವುದನ್ನು ತಿಳಿಯಬೇಕು, 'ತುಂಬಿದ ಕೊಡ ತುಳುಕುವುದಿಲ್ಲ' ಹಿರಿಯರ ಮಾತು ಎಂದಿಗೂ ಸತ್ಯ ಎಂಬ ಮಾತುಗಳಲ್ಲಿ ಸಂಗಮೇಶ ಗುಜಗೊಂಡರು ಮಕ್ಕಳಿಗೆ ಸಂದೇಶ ನೀಡಿದ್ದಾರೆ.

**೪. ಅನುಭವಸಾರ ಕವಿತೆಗಳು:**

'ಎತ್ತುಗಳೆರಡು ಬಣ್ಣದ ಬಂಡಿಯು
ಅಜ್ಜನ ಮಮತೆಯ ಪರಿವಾರ
ಬೆವರಿನ ಕೋಡಿಯು ದಿನವಿಡಿ ಹರಿವುದು
ಅಜ್ಜನು ದುಡಿಮೆಯ ಸರದಾರ'

ಈ ಕವಿತೆಯಲ್ಲಿ ಎಳೆಗರು ಎತ್ತಾಗುವಂತೆ ಅದನ್ನು ಪ್ರೀತಿಯಿಂದ ಸಾಕಿ ಸಲಹಿ ದೊಡ್ಡದಾಗುತ್ತ ಮೈ ತುಂಬಿಕೊಂಡಂತೆ ಬೆಳೆಸಿದ ಯಜಮಾನನಿಗೆ ಖುಷಿಯಾಗುತ್ತದೆ. ಆ ಖುಷಿಯೇ ಕೃಷಿಗೆ ಸಹಾಯಕವಾಗುತ್ತದೆ. ಎತ್ತು ಭೌತಿಕ ಕೃಷಿಗೆ ಆಸರೆಯಾದರೆ ಮಗುವಿನ ಮನಸ್ಸು ಬೌದ್ಧಿಕ ಕೃಷಿಗೆ ಒಳಗಾಗುತ್ತದೆ. ಒಳ್ಳೆಯ ನಡತೆ, ಸ್ನೇಹ, ನಂಬುಗೆ, ವಿವೇಕ ಪರಸ್ಪರ ಅವಲಂಬನೆ ಮುಂತಾದ ಸನ್ನಡತೆಯಲಿ ನಡೆದುಕೊಂಡಾಗ ಭವಿಷ್ಯದ ಬಾಳು ಬೆಳಗಲು ಸಾಧ್ಯವಾಗುತ್ತದೆ. ಎತ್ತುಗಳು ಅಜ್ಜನ ಒಳ್ಳೆಯ ನಡತೆಯ ಸ್ನೇಹಿತರಾಗಿವೆ. ಅಜ್ಜನ ಕೃಷಿಗೆ ದಿನವಿಡೀ ಆಸರೆಯಾಗಿವೆ. ಅಜ್ಜನ ದುಡಿಮೆಯ ಪಾಲುದಾರವಾಗಿವೆ. ಸಂತೋಷದಲ್ಲಿ ಎತ್ತುಗಳ ಶ್ರಮವು ಅಡಗಿದೆ. ಇಲ್ಲಿ ಸಂಗಮೇಶ ಗುಜಗೊಂಡರು ಕೃಷಿಯ ಬದುಕಿನ ಬಗ್ಗೆ ಸುಂದರವಾಗಿ ವರ್ಣಿಸಿದ್ದಾರೆ.

'ಅಜ್ಜಿಯು ಸಾಕಿದ ನೆಚ್ಚಿನ ಕಾಳಿಯು
ಹೆಮ್ಮೆಯ ಎಮ್ಮೆಯು ಆಗಿಹುದು
ಮುಂಜಾನೆ ಸಂಜೆಗೆ ಮೂರ್‍ನಾಲ್ಕು ತಂಬಿಗೆ
ಹಾಲನು ಪ್ರತಿದಿನ ಕೊಡುತಿಹುದು'

ಮಕ್ಕಳ ಮನಸ್ಸನ್ನು ಅರಿತಿರುವ ಸಂಗಮೇಶ ಗುಜಗೊಂಡರು ತಮ್ಮ ಕವಿತೆಗಳಲ್ಲಿ ಹೆಚ್ಚಾಗಿ ಗ್ರಾಮೀಣ ಪ್ರದೇಶದ ಬದುಕನ್ನೇ ಆಯ್ದುಕೊಂಡಿದ್ದಾರೆ. ಮಕ್ಕಳ ಬದುಕು ಕೂಡಾ ಹಳ್ಳಿಯ ಪರಿಸರದಲ್ಲಿಯೆ ಬೆಳೆದು ಬಂದಿರುತ್ತದೆ. ಇಲ್ಲಿ ಅಜ್ಜಿಯು ತನ್ನ ಕಾಳಿಗೆ ಮೇವಿನ ಜೊತೆಗೆ ನೆನೆಸಿದ ಕಾಳನ್ನು ತಿನ್ನಿಸುವಳು, ಕಾಳಿಯ ಹೊಟ್ಟೆಗೆ ಏನೂ ಕೊರತೆಯು ಮಾಡದೆ ಅದನ್ನು ದಷ್ಟಪುಷ್ಟವಾಗಿ ಬೆಳೆಸಿದ್ದಾಳೆ. ಕಾಳಿಯು ಪ್ರತಿದಿನವೂ ನಾಲ್ಕೈದು ಲೀಟರ್ ಹಾಲು ಕೊಡುತ್ತದೆ. ಕಾಳಿಯು ಅಜ್ಜಿಯ ಜೀವನಕ್ಕೆ ಸಹಕಾರಿಯಾಗಿದೆ. ಆರೋಗ್ಯಕ್ಕೆ ಚೈತನ್ಯ ನೀಡುವ ಹಾಲು ಎಲ್ಲ ಮಕ್ಕಳಿಗೂ ಬೇಕು, ಇಂತಹ ಕವಿತೆಗಳು ಮಕ್ಕಳಿಗೆ ಮುದ

ನೀಡುವಂತಹವು. ಇಂತಹ ಕವಿತೆಗಳು ಸಂಗಮೇಶ ಗುಜಗೊಂಡರ ಕೃತಿಗಳಲ್ಲಿ ದಟ್ಟ ಅನುಭವಕ್ಕೆ ನಿದರ್ಶನವಾಗಿವೆ.

‘ಅಜ್ಜನ ಊರು
ಚಿಕ್ಕದು ಹಳ್ಳಿ
ಸುತ್ತಲು ತೋಟ ಹರಡಿಹವು
ಹೊಲಗಳ ಬದುವು
ಬೀದಿಯ ಬದಿಗೆ
ಮರಗಳು ವಿಶಾಲ ಬೆಳೆದಿಹವು
ಹಾವಿನ ಹಾಗೆ
ಹರಿಯುವ ಹಳ್ಳ
ತಿಳಿತಿಳಿ ನೀರು ಅಲ್ಲಿಹುದು
ಶುದ್ಧಗಾಳಿ
ತಂಪನು ಹಾಡಿ
ಸುಳಿ ಸುಳಿ ಸುಳಿದು ಬೀಸುವುದು’[೨೮]

ಕೆಲವು ಹಾಡುಗಳು ಅರ್ಥವಂತಿಕೆಯಿಂದ ಕೂಡಿದ್ದು ಮಕ್ಕಳ ಆಟಗಳಲ್ಲಿ ಮಕ್ಕಳಿಂದಲೇ ಸಹಜವಾಗಿ ಹುಟ್ಟಿಕೊಂಡಂತಹುಗಳು. ಬೇಸಿಗೆ ರಜೆಯಲಿ ಅಜ್ಜನ ಊರಿಗೆ ಹೋಗುವದೆಂದರೆ ಮಕ್ಕಳಿಗೆ ತುಂಬಾ ಇಷ್ಟ. ಮಕ್ಕಳು ಬೇಸಿಗೆ ರಜೆಯಲ್ಲಿ ರಜೆಯ ಮಜಾ ಪಡೆಯಲು ಮರದಿಂದ ಮರಕ್ಕೆ ಜಿಗಿದಾಡುವುದು, ಹಳ್ಳ-ಕೊಳ್ಳಗಳ ತಿಳಿ ನೀರಿನಲ್ಲಿ ಈಜಾಡುವುದು, ತೋಟದ ಬದಿಯಲಿ ಸಾಲುಸಾಲು ಗಿಡಗಳು, ತಂಪನು ನೀಡಿ ಶುದ್ಧ ಗಾಳಿಯನ್ನು ನೀಡುವವು. ಊರಿನ ಬೀದಿಯ ಬದಿಗೆ ಹಾವಿನ ಹಾಗೆ ಅಂಕುಡೊಂಕಾಗಿ, ಜುಳು-ಜುಳು ಹರಿಯುವ ಹಳ್ಳ-ಇವೆಲ್ಲವೂ ಮಕ್ಕಳಿಗೆ ಮುದ ನೀಡುವಂತಹದ್ದು. ಅಜ್ಜ ಮನೆಯಲ್ಲಿದ್ದರೆ ಚೆನ್ನ. ಅಜ್ಜ ನಮ್ಮೆಲ್ಲರಿಗೂ ಮಾರ್ಗದರ್ಶನ ಮಾಡುತ್ತಾನೆ. ಅಜ್ಜನ ಊರಿನಲ್ಲಿ ರಜೆಯ ಮಜೆಯಲಿ ಮಕ್ಕಳು ಹಕ್ಕಿಗಳಾಗುವದು, ಪ್ರಾಣಿಗಳಾಗುವುದು, ಅವುಗಳಂತೆ ನಟಿಸಿ ನಲಿಯುವುದನ್ನು ಇಷ್ಟಪಡುತ್ತಾರೆ. ಸಂಗಮೇಶ ಗುಜಗೊಂಡರ ಕವಿತೆಗಳು ಇಲ್ಲಿ ಹಿರಿಯರನ್ನು ಕಿರಿಯರನ್ನು ರಂಜಿಸುವಂತೆ ಮನ ಸೆಳೆಯುತ್ತವೆ.

**೫. ವಾತ್ಸಲ್ಯ ಕವಿತೆಗಳು:**

ಸಂಗಮೇಶ ಗುಜಗೊಂಡರ ಕಾವ್ಯದಲ್ಲಿ ಅಪ್ಪ-ಅಮ್ಮ, ಅಜ್ಜ-ಅಜ್ಜಿ, ಗೆಳೆಯ-ಗೆಳತಿಯರು, ಗುರುಗಳು ಹೀಗೆ ವಾತ್ಸಲ್ಯದಿಂದ ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ವಾತ್ಸಲ್ಯ, ಪ್ರೀತಿ, ಕರುಣೆ ಇವರ ಕವಿತೆಗಳಲ್ಲಿ ಹಾಸುಹೊಕ್ಕಾಗಿದೆ. ಶಿಶುಕವಿತೆಗಳೆಂದರೆ

[೨೮] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೨೫.

ಬಾಲ್ಯದ ನೆನಪುಗಳ ಬುತ್ತಿಯನ್ನು ಬಿಚ್ಚಿದಂತೆ ಮಕ್ಕಳ ಸಾಹಿತ್ಯದ ಭಾಷೆ ಸರಳವಿದ್ದರೂ ಎಂಥಲ್ಲಿ ವಿಶಿಷ್ಟವಾಗಿರುತ್ತದೆ ಎನ್ನುವುದು ಒಂದು ಪ್ರಮುಖ ಅಂಶವಾಗಿರುತ್ತದೆ. ಪದಗಳ ಆಯ್ಕೆ ಅವುಗಳ ಲಾಲಿತ್ಯ ಪ್ರಾಸಬದ್ಧತೆ, ಚಿಕ್ಕದರಲ್ಲಿಯೇ ಚೊಕ್ಕದಾಗಿ ಆಕರ್ಷಕವಾಗಿ ಹಲವು ಅರ್ಥಗಳ ವಿವಿಧ ರೂಪಗಳ ಶಬ್ದಗಳನ್ನು ಚಮತ್ಕಾರಿಕವಾಗಿ ಬಳಸಿರುವಲ್ಲಿ ಅಂಥ ವಿಶೇಷವನ್ನು ಕಾಣಬಹುದು. ಮಕ್ಕಳ ಸಾಹಿತ್ಯ ಭಾಷೆ ತೀರ ಸರಳವಾಗಿದೆ. ಮಕ್ಕಳ ವಯಸ್ಸು, ಶಿಕ್ಷಣ, ಪರಿಸರ, ಭಾಷಾ ಮಟ್ಟ, ಭಾಷಾಕೌಶಲ್ಯ, ಹೀಗೆ ವಿವಿಧ ಅಂಶಗಳನ್ನು ಸಂಗಮೇಶ ಗುಜಗೊಂಡರು ತಮ್ಮ ಕವಿತೆಗಳಲ್ಲಿ ಪರಿಗಣಿಸಿದ್ದಾರೆ. ಅದರಲ್ಲೂ ವಾತ್ಸಲ್ಯಮಯವಾದ ಕವಿತೆಗಳು ತನ್ನದೇ ಆದ ವೈಶಿಷ್ಟ್ಯತೆಗಳನ್ನು ಹೊಂದಿವೆ.

‘ಅಣ್ಣನು ತಂದಿಹ
ಬಣ್ಣದ ಸೈಕಲ್
ಮೋಹಕ ರೂಪವ ಹೊಂದಿಹುದು
ಟ್ರಿಣ್ ಟ್ರಿಣ್ ಗುಟ್ಟುವ
ಗಂಟೆಯ ಮೆಲುದನಿ
ಗೆಜ್ಜೆಯ ನಾದದ ತೆರನಿಹುದು’

ಈ ಕವಿತೆಯಲ್ಲಿ ತಂಗಿಯ ಮೇಲಿನ ಅಣ್ಣನ ಮಮತೆ ಬರಿ ಸೊಗಸಲ್ಲ! ಬಲು ಸೊಗಸು. ಇದು ಸಂಗಮೇಶ ಗುಜಗೊಂಡರ ಸಂಸ್ಕೃತಿ. ಇಲ್ಲಿ ಅಣ್ಣ ತಂಗಿಯರ ಪ್ರೀತಿ ಒಬ್ಬರಿಗೊಬ್ಬರು ಹರಿದು ಹಂಚಿ ತಿನ್ನುವ, ಒಬ್ಬರಿಗೊಬ್ಬರು ಪ್ರೀತಿಯ ಉಡುಗೊರೆ ಕೊಡುವ ಮೂಲಕ ಇಲ್ಲಿ ವಾತ್ಸಲ್ಯದ ಸಂಸ್ಕೃತಿ ಮುಡಿಬಂದಿದೆ. ತಾಯಿ ತನ್ನ ಮಕ್ಕಳಿಗಾಗಿ ಬದುಕನ್ನೇ ಧಾರೆ ಎರೆಯುವಳು. ಅಣ್ಣ ತನ್ನ ತಂಗಿಗಾಗಿ ಪ್ರೀತಿಯನ್ನೇ ಧಾರೆಯೆರೆಯುವನು. ಈ ರೀತಿಯಾಗಿ ಇಲ್ಲಿಯ ನಡೆ-ನುಡಿಗಳೇ ವಾತ್ಸಲ್ಯದ ಪ್ರತೀಕವಾಗಿ ಈ ಕವಿತೆಗಳಲ್ಲಿ ಜೀವ ತುಂಬಿವೆ.

‘ಮುಖ್ಯ ಗುರುಗಳು
ಹುಟ್ಟಿದ ಹಬ್ಬಕೆ
ಬಂದಿತು ಚಿನ್ನದ ಸಡಗರವು
ಶಾಲೆಯ ಬಯಲಲಿ
ಸುವರ್ಣ ಉತ್ಸವ
ಕುಣಿಯಿತು ಚಿಲಿಪಿಲಿ ಸಂಕುಲವು...’

ಇಲ್ಲಿಯ ಕವಿತೆಯ ಸಾಲುಗಳಲ್ಲಿ ಗುರು-ಶಿಷ್ಯರ ಬಾಂಧವ್ಯ ಪ್ರಚುರವಾಗಿದೆ. ಮಕ್ಕಳಿಗೆ ಬದುಕಿನ ಶಿಕ್ಷಣವನ್ನು ಕೊಟ್ಟ ಗುರುಗಳ ಹುಟ್ಟುಹಬ್ಬದ ಸಂದರ್ಭದಲ್ಲಿ ಮಕ್ಕಳು ಅದನ್ನು ಪ್ರೀತಿ, ವಾತ್ಸಲ್ಯದಿಂದ ಆಚರಿಸಿದ್ದಾರೆ. ಇದನ್ನು ಸಂಗಮೇಶ ಗುಜಗೊಂಡರು ತಮ್ಮ

ಕವಿತೆಯ ಸಾಲುಗಳಲ್ಲಿ ಸೆರೆಹಿಡಿದಿದ್ದಾರೆ. ಇಲ್ಲಿ ಮುಖ್ಯ ಗುರುಗಳು ಮಕ್ಕಳಲ್ಲಿ ಹೊಸ ಹೊಸ ವಿಷಯಗಳ ಕುರಿತು ಜಿಜ್ಞಾಸೆಯನ್ನು ಹುಟ್ಟಿಸಬೇಕು. ಅವರ ಜ್ಞಾನದ ಹಂಬಲವನ್ನು ಹತ್ತಿಕ್ಕಬಾರದು. ಅವರ ಮೃದು ಮನಸ್ಸನ್ನು ಗಾಸಿಗೊಳಿಸಬಾರದು. ಕಲಿಕೆಯಲ್ಲಿ ಅವರಿಗೆ ಅಭಿರುಚಿ, ಉತ್ಸಾಹ, ಶಕ್ತಿ, ಸಾಮರ್ಥ್ಯ ಉಂಟುಮಾಡಬೇಕು. ಮಗುವಿನಲ್ಲಿ ನಂಬಿಕೆಯ ಭಾವಗಳನ್ನು ತುಂಬಬೇಕು. ಪ್ರತಿ ವಿಷಯದಲ್ಲಿಯೂ ಆತ್ಮವಿಶ್ವಾಸ, ಧೈರ್ಯ ತುಂಬಬೇಕು. ಎಲ್ಲವನ್ನೂ, ಎಲ್ಲರನ್ನೂ ಪ್ರೀತಿಸುವಂತೆ ಮಾಡಬೇಕು. ಆಲಸ್ಯದಿಂದ ಮಗುವನ್ನು ಮುಕ್ತಗೊಳಿಸಬೇಕು. ಬದುಕನ್ನು ಹಸನಾಗಿಸುವ ಸಂಸ್ಕಾರಗಳನ್ನು ನೀಡಬೇಕೆಂಬುದನ್ನು ಕವಿತೆ ನಿವೇದಿಸಿದೆ. ಶಾಲೆಯ ಮುಖ್ಯ ಗುರುಗಳ ಹುಟ್ಟುಹಬ್ಬವನ್ನು ಆಚರಿಸಲು ಶಾಲೆಯ ಅಂಗಳದಿ ಸೇರಿದ ಚಿಲಿಪಿಲಿಗುಟ್ಟುವ ಮಕ್ಕಳ ಸಂಭ್ರಮ, ಆ ಸಂತೋಷ, ಮಕ್ಕಳ ಮುಖದಲ್ಲಿ ನಗೆ, ಉತ್ಸಾಹ ಗುರುಗಳ ಮೇಲಿನ ಪ್ರೀತಿ, ನಂಬಿಕೆ, ಈ ಕವಿತೆಯಲ್ಲಿ ಮುಖ್ಯವಾಗಿ ಕಂಡುಕೊಳ್ಳಬಹುದು. ಸಂಗಮೇಶ ಗುಜಗೊಂಡರ ಬಾಲ್ಯದ ನೆನಪುಗಳು ಇಲ್ಲಿ ಅನಾವರಣಗೊಳಿಸಲಾಗಿದೆ.

'ಅಜ್ಜನ ತರಹ ರೈತನು ಆಗಲು
ಪುಟ್ಟನು ತಾನು ಬಯಸಿಹನು
ಬಿಡುವಿನ ವೇಳೆ ಮರೆಯದೆ ಹೊಲಕೆ
ಅಜ್ಜನ ಜೊತೆಗೆ ಹೋಗುವನು'

ಮುಂಜಾವಿನ ಹೊತ್ತಿನಲಿ ಕೋಳಿಯ ಕೂಗು ಕೇಳಿಸುತ್ತಿದ್ದಂತೆ ಹಳ್ಳಿಯ ರೈತರೆಲ್ಲ ಎತ್ತು, ಬಂಡಿಯನ್ನು ಹೂಡಿಕೊಂಡು ಹೊಲದ ಕಡೆ ಹೋಗುವುದನ್ನು ನೋಡಿದರೆ 'ಇವನೇ ನೋಡು ಅನ್ನದಾತ ಹೊಲದಿ ದುಡಿದೆ ದುಡಿವನು' ಎನ್ನುವ ಸತ್ಯಾರ್ಥಿಯವರ ಮಾತು ನೆನಪಾಗುತ್ತದೆ. ಮಗು ಬೆಳಗಿನ ಜಾವದಲಿ ಎದ್ದು, ಹಿರಿಯರಿಗೆ, ತಂದೆ, ತಾಯಿ, ಅಜ್ಜ, ಅಜ್ಜಿಗೆ ವಂದಿಸಿ ಅಜ್ಜನ ಜೊತೆಗೆ ಹೊಲದಲ್ಲಿ ಕೆಲಸ ಮಾಡುವುದೆಂದರೆ ಮಗುವಿಗೆ ಎಲ್ಲಿಲ್ಲದ ಖುಷಿ. ರಜೆಯ ದಿನದಲಿ ಪುಟ್ಟನು ಅಜ್ಜನೊಂದಿಗೆ ಹಳ್ಳಿಯ ರೈತನಾಗುವ ಆಸೆ ಬಾಲ್ಯದಲ್ಲಿಯೇ ಬೆಳೆಸಿಕೊಳ್ಳುತ್ತಿರುವುದು, ರೈತನು ಪರರಿಗಾಗಿ ಕಷ್ಟಪಟ್ಟು ದುಡಿಯುವ ಪರಿಯನ್ನು ಹಾಗೂ ರೈತನ ಕಷ್ಟಸಹಿಷ್ಣುತೆಯನ್ನು ಕವಿತೆಯಲ್ಲಿ ಮೂಡಿದೆ. ರೈತನನ್ನು ಯೋಗಿ, ತ್ಯಾಗಿ, ಅವನ ಜೀವನವನ್ನು ಸೆರೆಹಿಡಿದು ಮುಗ್ಧ ಮಕ್ಕಳು ಚೆನ್ನಾಗಿ ಹಾಡಿ ಕುಣಿದು ಆನಂದಪಟ್ಟುಕೊಳ್ಳುವಂತೆ ಕವಿತೆ ರಚಿಸಿದ್ದಾರೆ.

**೬. ಸಾಂಪ್ರದಾಯಿಕ ಹಾಗೂ ಸಾಮಾಜಿಕ ಕವಿತೆಗಳು :**

ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡ ಸಂಗಮೇಶ ಗುಜಗೊಮಡರು ಕತೆ, ಕವನ, ಲೇಖನ, ವ್ಯಕ್ತಿಪರಿಚಯ ಹೀಗೆ ಹಲವು ನಿಟ್ಟಿನಲ್ಲಿ ಸಾಹಿತ್ಯ ಕೃಷಿ ಮಾಡಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಅದರಲ್ಲೂ ಕಾವ್ಯ ಕ್ಷೇತ್ರದಲ್ಲಿ ಹುಲುಸಾಗಿ

ಬೆಳೆದು ಗುರುತಿಸಿಕೊಂಡಿದ್ದಾರೆ. ಇಲ್ಲಿ ಸಾಂಪ್ರದಾಯಿಕ ಹಾಗೂ ಸಾಮಾಜಿಕ ಕವಿತೆಗಳು ಗ್ರಾಮೀಣ ಪ್ರದೇಶದ ಸೊಗಡನ್ನು ಬಿಂಬಿಸುತ್ತವೆ. ಊರು, ಕೇರಿ, ಜಾತ್ರೆ, ಹಬ್ಬ, ಹರಿದಿನ ಇವುಗಳ ಬಗ್ಗೆ ಕಾವ್ಯದಲ್ಲಿ ಹೆಣೆಯುತ್ತ ಕವಿಯು ಸಮಾಜದ ಒಂದು ಅಂಗವಾಗಿರುವುದರಿಂದ ಮತ್ತು ತನ್ನ ಸಾಮಾಜಿಕ ಸಂಪರ್ಕ ಮಾಧ್ಯಮದ ಭಾಷೆಯ ಮೂಲಕವೇ ತನ್ನ ಸಮಾಜದೊಂದಿಗೆ ಕೃತಿಗಳ ಮುಖೇನ ವ್ಯವಹರಿಸಬೇಕಾಗುತ್ತದೆ. ಸಾಹಿತ್ಯ ಹಾಗೂ ಸಮಾಜದ ಸಂಬಂಧ ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಸಂಗಮೇಶ ಗುಜಗೊಂಡರು ಸಮಕಾಲೀನ ಸಮಾಜವನ್ನು ಸ್ಪಂದಿಸಿ ಸಮಾಜದ ಆಗು ಹೋಗುಗಳು, ಸಾಮಾಜಿಕ ಬದ್ಧತೆಯ ಕವಿತೆಗಳು ಸ್ವಾರಸ್ಯಕರವಾಗಿವೆ.

'ಹಬ್ಬದ ದಿನದಿ
ಹಳ್ಳಿಯ ಜನತೆ
ಎಲ್ಲರು ಕಲೆತು ನಲಿಯುವರು
ಒಂದೇ ಮನೆಯ
ಭಾವದಿ ಬಾಳಿ
ಊರನೇ ಸ್ವರ್ಗ ಮಾಡಿಹರು
ಚೆಲುವಿನ ತಾಣ
ಪ್ರೀತಿಯ ನೆಲೆಯು
ಅಜ್ಜನ ಊರು ಆಗಿಹುದು
ಗಗನದಿ ಹೊಳೆವ
ತಾರೆಯ ತೆರನೆ
ಭೂಮಿಯ ಮೇಲೆ
ಬೆಳಗಿಹುದು'[೨೯]

ಇಂಥ ದೃಶ್ಯಗಳನ್ನು ಆಯ್ದುಕೊಳ್ಳುವಲ್ಲಿ ಸಂಗಮೇಶ ಗುಜಗೊಂಡರು ಸಿದ್ಧಹಸ್ತರು. ಇವರ ಕಾವ್ಯದಲ್ಲಿ ಸರಳತೆ ಮತ್ತು ನೈಜತೆ ಕೂಡಿಕೊಂಡಿದೆ. ಪುಟ್ಟ ಅಜ್ಜನ ಊರಿಗೆ ಹೋದಾಗ ಆ ಊರಿನ ಸುತ್ತಲು ಹಳ್ಳ-ಕೊಳ್ಳ-ಎತ್ತರ ಎತ್ತರ ಮರಗಳು, ಚಿಕ್ಕ ಹಳ್ಳಿಯಲ್ಲಿ ನೂರೆ ಮನೆಗಳಿದ್ದರೂ ಅಲ್ಲಿಯ ಸಂಪ್ರದಾಯ ಸಾಮಾಜಿಕ ಬಾಂಧವ್ಯ, ಪ್ರೀತಿ, ಒಗ್ಗಟ್ಟು, ಅಜ್ಜನ ಊರಿನ ಜಾತ್ರೆಯ ಸಂಭ್ರಮ ಮತ್ತು ಅಲ್ಲಿಯ ಮಾನವೀಯ ಗುಣಗಳು ಪುಟ್ಟನ ಮೇಲೆ ಪ್ರಭಾವ ಬೀರಿದವು. ಅಲ್ಲಿ ಜಾತಿಭೇದವಿಲ್ಲ. ಎಲ್ಲರೂ ಒಗ್ಗಟ್ಟಾಗಿ ಊರ ದೇವರ ಜಾತ್ರೆಯಲಿ ತೇರನೆಳೆಯುತ ಮುಂದೆ ಸಾಗಿ ಒಂದೇ ಭಾವ, ಒಂದೇ ಮನಸ್ಸಿನವರಂತೆ ಪರಸ್ಪರ ಸಹಾಯ ಸಹಕಾರ, ಗುರು-ಹಿರಿಯರಿಗೆ ಗೌರವ ಆ ಊರಿನ ನೀತಿಯ

---

[೨೯] ಸಂಗಮೇಶ ಗುಜಗೊಂಡ, ಮತ್ತೆ ಬಂತು ಚೈತ್ರ, ಪು. ೨೫.

ಮೌಲ್ಯಗಳು ಊರನ್ನೇ ಸ್ವರ್ಗದಂತೆ ಮಾಡಿರುವ ಇಂತಹ ಮಾನವೀಯ ಮೌಲ್ಯಗಳು ಮಗು ಬೆಳೆಸಿಕೊಳ್ಳಬೇಕು ಎನ್ನುವುದೇ ಸಂಗಮೇಶ ಗುಜಗೊಂಡರ ಆಶಯ. ಅಲ್ಲಿಯ ಸಾಂಸ್ಕೃತಿಕ ರೀತಿ–ನೀತಿಗಳು ಹಳ್ಳಿಯ ಗ್ರಾಮ ಸಂಸ್ಕೃತಿಯನ್ನು ತಮ್ಮ ಕವಿತೆಯಲ್ಲಿ ಹೆಚ್ಚು ಬಿಂಬಿಸುತ್ತಾರೆ.

'ಹಚ್ಚನೆ ಹಸುರನು ಹೊತ್ತಿಯ ಮರಗಳು
ಶಾಲೆಯ ಸುತ್ತಲು ಬೆಳದಿಹವು
ಬಗೆಬಗೆ ಬಣ್ಣದ ಹೂಗಳ ಬಿಟ್ಟಿಹ
ಬಳ್ಳಿಯ ಕಮಾನು ಕಟ್ಟಿಹವು'

ಕವಿ ಸಂಗಮೇಶ ಗುಜಗೊಂಡರು ಮಕ್ಕಳಿಗೆ ಪರಿಸರದ ಕಿವಿ ಮಾತು ತಮ್ಮ ಕವಿತೆಯಲ್ಲಿ ಹೇಳಿದ್ದಾರೆ. ಪರಿಸರ ಬೆಳೆಸುವುದರಿಂದ ಆಗುವ ಲಾಭಗಳು ಮತ್ತು ಪರಿಸರ ಹಾನಿಯಾದರೆ ಆಗುವ ಅನಾಹುತಗಳ ಬಗ್ಗೆ ನಾವು ಸಂಗಮೇಶ ಗುಜಗೊಂಡರ ಕವಿತೆಗಳನ್ನು ಓದಿದಾಗ ಗೊತ್ತಾಗುತ್ತದೆ. ಇಂದು ಪರಿಸರ ಮಾಲಿನ್ಯದಿಂದ ಉಂಟಾದ ಹಾನಿಯನ್ನು ಕುರಿತು ಇನ್ನೂ ಇವರ ಹಲವು ಕವಿತೆಗಳು ತಿಳಿಸಿಕೊಡುತ್ತವೆ. ಶಾಲೆಯಲ್ಲಿ ಗುರುಗಳು ಪರಿಸರ ಪ್ರೇಮಿ ಸಾಲುಮರದ ತಿಮ್ಮಕ್ಕನ ಕುರಿತು, ಪರಿಸರಪ್ರಜ್ಞೆ, ಕಾಳಜಿ ಇಂತಹ ಮೌಲ್ಯಯುತ ಸಂಗತಿಗಳನ್ನು ಗುರುಗಳು ಮಕ್ಕಳಿಗೆ ತಿಳಿಸಿ ಕೊಟ್ಟಿದ್ದೇಯಾದರೆ ಅವರೂ ಸಹ ಶಾಲೆಯಲ್ಲಿ, ಮನೆಯ ಹಿತ್ತಲಲ್ಲಿ ಮರಗಳನ್ನು ಬೆಳೆಸುವರು. ಬಣ್ಣ ಬಣ್ಣದ ಹೂಗಿಡಗಳನ್ನು ಬೆಳೆಸುವರು. ಶಾಲೆ, ಊರು, ಪರಿಸರದಿಂದ ಸುಂದರವಾಗಿ ಕಂಗೊಳಿಸುವದು. ಮಕ್ಕಳಿಗೆ ಊರಿನ ಬಗ್ಗೆ, ಪರಿಸರದ ಬಗ್ಗೆ ಇಂತಹ ಸಾಮಾಜಿಕ ಪ್ರಜ್ಞೆಯನ್ನು ಮಕ್ಕಳ ಮನದಲ್ಲಿ ಉತ್ತಮ ಪರಿಣಾಮ ಬೀರಬಲ್ಲದು ಎಂಬುದೇ ಸಂಗಮೇಶ ಗುಜಗೊಂಡರ ಅಭಿಮತ.

ಸಂಗಮೇಶ ಗುಜಗೊಂಡ ಅವರು ತಮ್ಮ ಕಾವ್ಯದಲ್ಲಿ ನಿಸರ್ಗ ಕವಿತೆಗಳು, ದೇಶಾಭಿಮಾನ, ಅನುಭವ, ನೀತಿಯ ಕವಿತೆಗಳು, ಸಾಮಾಜಿಕ ಕವಿತೆಗಳು ಮಕ್ಕಳು ಉತ್ತಮ ಸನ್ಮಾರ್ಗದಲ್ಲಿ ನಡೆಯಲು ಪ್ರೇರಣೆ ನೀಡುತ್ತವೆ. ಅವರ ಮಾನಸಿಕ, ಬೌದ್ಧಿಕ, ಬೆಳವಣಿಗೆಗೆ ಇವರ ಕಾವ್ಯಗಳು ಪೂರಕವಾಗಿ ನಿಂತಿವೆ.

**ಕಥೆಯ ವೈಶಿಷ್ಟ್ಯತೆ :**

'ನೂರು ನಾಣ್ಯ ಮೂರು ಮಾತು' ಕಥಾ ಸಂಕಲನದಲ್ಲಿ ಒಟ್ಟು ೧೦ ಕಥೆಗಳಿವೆ. ಮಣ್ಣಿನಲ್ಲಿ ಚಿನ್ನವಿದೆ, ಬದಲಾದ ವ್ಯಾಪಾರಿ, ಪರಮ ಧರ್ಮ, ಗುಟ್ಟಿನ ಪಾಲು, ಧೀರ ಚೆಲ್ಲಾಳ, ಅಜ್ಜ ಹೇಳಿದ ಮಾತು, ವಿಚಿತ್ರರಾಜ ಅಪರೂಪದ ಪಂಡಿತ, ಇನಾಮು ಪತ್ರ, ಅಬು ಬಿಟ್ಟು ಅಂಜಾರಕ್ಕೆ, ನೂರು ನಾಣ್ಯ ಮೂರು ಮಾತು ಹೀಗೆ ಹತ್ತು ಕಥೆಗಳು ಮಕ್ಕಳ ಕುತೂಹಲ ಕೆರಳಿಸುತ್ತವೆ. ಮನರಂಜನೆ ನೀಡುತ್ತವೆ. ಮಕ್ಕಳಿಗೆ ಸಹೃದಯತೆಯ ಭಾವ ಸಾರುತ್ತವೆ. ಇಂತಹ ಮಕ್ಕಳ ಕಥೆಗಳು ನೆಮ್ಮದಿಯ ಬದುಕಿಗೆ ದಾರಿದೀಪವೆಂದರೆ

ತಪ್ಪಾಗಲಾರದು. ಮಕ್ಕಳಿಗೆ ಕಥೆ ಹೇಳುವುದರ ಮೂಲಕ ಅವರ ಮನಸ್ಸನ್ನು ಪರಿವರ್ತನೆ ಮಾಡಬಹುದು. ತತ್ವಾದರ್ಶಗಳ ಬೋಧನೆಗೆ ಮಕ್ಕಳ ಮೇಲೆ ಕಥೆಗಳು ತಮ್ಮ ಪ್ರಭಾವ ಬೀರಿ ಮುನ್ನಡೆಸುತ್ತವೆ. ನೀತಿ ನಿಪುಣರನ್ನಾಗಿ ಮಾಡಲು ಸಂಗಮೇಶ ಗುಜಗೊಂಡರ ಮೊದಲ ಕಥಾ ಸಂಕಲನದ ಹತ್ತೂ ಕಥೆಗಳು ತುಂಬಾ ಪ್ರಭಾವ ಬೀರುತ್ತವೆ.

'ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು', ಎರಡನೆಯ ಕಥಾ ಸಂಕಲನದಲ್ಲಿ ಒಟ್ಟು ೧೨ ಕಥೆಗಳು ಒಳಗೊಂಡಿವೆ. ದೀಪು ಮತ್ತು ಗಾಳಿಪಟ, ಹೋದ ಮಳೆ ಬಂತು, ಬುಲಂದರನ ಸಾಹಸ, ಕಳ್ಳ ಶಿಷ್ಯನಾದ, ರಾಜಕುಮಾರಿಯ ಔದಾರ್ಯ, ಕೆಲಸ ಇದ್ದೇ ಇದೆ, ಭಾಗೀರಥಿಯ ಉಪಾಯ, ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು, ದಾರಿಬುತ್ತಿ ನೆತ್ತಿಬುತ್ತಿ, ಗೆಳೆತನ, ಶಿವರಾಜ ಮತ್ತು ಸಣ್ಣನದಿ, ಭೂಮಿಪೂಜೆ, ಹೀಗೆ ಹನ್ನೆರಡು ಕಥೆಗಳು ಮಕ್ಕಳ ಕಲ್ಪನಾಶಕ್ತಿ ವಿಸ್ತಾರಗೊಳ್ಳಲು ವೈಜ್ಞಾನಿಕ ಕಥೆಗಳು ಮೂಢ ನಂಬಿಕೆಯನ್ನು ಹೋಗಲಾಡಿಸಲು ಸಹಕಾರಿಯಾಗುತ್ತವೆ. ಹೊಸ ಹೊಸ ವಿಚಾರಧಾರೆ ನೀಡಲು ಪ್ರೇರಣೆ ನೀಡುತ್ತವೆ. ಒಳ್ಳೆಯ ನಾಗರಿಕ ಒಳ್ಳೆಯ ಮಾನವನನ್ನಾಗಿ ಅಣಿಗೊಳಿಸಲು ಪ್ರಭಾವ ಬೀರುತ್ತವೆ.

* * * * *

# ಅಧ್ಯಾಯ : ಆರು

# ಸಮಾರೋಪ

**ಅಧ್ಯಯನದ ಒಟ್ಟು ಫಲಶೃತಿ:**

ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಬೆಳೆ ಇತ್ತೀಚೆಗೆ ಹುಲುಸಾಗಿದೆ ಎಂಬ ತೃಪ್ತಿಯಿದ್ದರೂ ಗುಣಮಟ್ಟಕ್ಕೆ ಪೂರ್ಣವಾಗಿ ಈ ತೃಪ್ತಿಯನ್ನು ವಿಸ್ತರಿಸಲಾಗುತ್ತಿಲ್ಲವೆಂಬ ಕೊರಗು ಇದ್ದೇ ಇದೆ. ನವೋದಯ ಕಾಲದಲ್ಲಿ ಸೃಷ್ಟಿಯಾದಂತಹ ಪುನರುಪಿ ಗುನುಗುನಿಸಿ ಆನಂದಿಸುವ ಮಕ್ಕಳ ಪದ್ಯಗಳು ಈಗ ಅಲ್ಲೊಂದು ಇಲ್ಲೊಂದು ಮಾತ್ರ ಸೃಷ್ಟಿಯಾಗುತ್ತಿವೆ. ಒಟ್ಟಾರೆ ಲವಲವಿಕೆಯುಳ್ಳ ಮಕ್ಕಳ ಸಾಹಿತ್ಯದ ನಿರ್ಮಾಣಕ್ಕೆ ಪೂರಕವಾದ ಕ್ರಮಗಳನ್ನು ಕೈಗೊಳ್ಳಬೇಕಾದ ಅವಶ್ಯಕತೆಯೊಂದು ಇದೆಯೆಂದು ಅನಿಸುತ್ತದೆ. ಇಲ್ಲಿ ಮಕ್ಕಳ ಅಭಿರುಚಿ, ಕ್ರಿಯಾಶೀಲತೆ, ಮನೋಧರ್ಮ ಮತ್ತು ಬುದ್ಧಿಯ ಮಟ್ಟವನ್ನು ಅನುಸರಿಸಿ ಮಕ್ಕಳ ಸಾಹಿತ್ಯ ರಚಿಸಿದರೆ ತುಂಬಾ ಔಚಿತ್ಯಪೂರ್ಣವಾಗಿರುತ್ತದೆ. ಮಕ್ಕಳಿಗಾಗಿ ಸಾಹಿತ್ಯ ರಚಿಸುವುದು ಅಷ್ಟು ಸುಲಭದ ಮಾತೇನಲ್ಲ. ಮಕ್ಕಳ ಸಾಹಿತ್ಯ ಮುಖ್ಯವಾಗಿ ಮಾನವೀಯ ಸಂಗತಿಗಳನ್ನು ಒಳಗೊಂಡಿರಬೇಕು. ನೀತಿ, ಮೌಲ್ಯ, ಆದರ್ಶಗಳನ್ನು ಅರ್ಥಮಾಡಿಕೊಳ್ಳುವಷ್ಟು ಸಾಮರ್ಥ್ಯ ಮಕ್ಕಳಲ್ಲಿ ಬೆಳೆಸಬೇಕು.

ಮಕ್ಕಳ ಸಾಹಿತ್ಯದಲ್ಲಿ ಸಹಬಾಳ್ವೆಯ ಗುಣವಿರಬೇಕು. ಬಾಲ್ಯಾವಸ್ಥೆಯ ಭಾವನೆಗಳನ್ನು ಭೂಮಿ, ಬಾನು, ಚಂದಿರ, ಮಳೆ, ಬಳ್ಳಿ, ಹಕ್ಕಿ, ಹೀಗೆ ಹಲವಾರು ವಸ್ತುಗಳ ಮುಖೇನ ಮಕ್ಕಳ ಮನಸ್ಸು ವಿಕಾಸವಾಗುವಂತೆ ಮಾಡಬೇಕು. ಪರಿಸರಪ್ರಜ್ಞೆ, ನಾಡು-ನುಡಿ ಪ್ರಜ್ಞೆ, ರಾಷ್ಟ್ರಪ್ರೇಮ ಬೆಳೆಸುವಂತ ಕವನಗಳನ್ನು ಕಟ್ಟಬೇಕು. ಮಕ್ಕಳ ಬೌದ್ಧಿಕ ಮತ್ತು ಮಾನಸಿಕ ವಿಕಾಸಕ್ಕೆ ತಕ್ಕಂತೆ ಸಾಹಿತ್ಯದ ರಚನೆ ಮಾಡಬೇಕು. ಮಕ್ಕಳ ಸಾಹಿತ್ಯ ನಡೆದು ಬಂದ ದಾರಿಯನ್ನು ನಿಖರವಾಗಿ ಮತ್ತು ನಿಚ್ಚಳವಾಗಿ ಗುರುತಿಸುವುದು ಕಷ್ಟ. ಏಕೆಂದರೆ ಮಕ್ಕಳ ಸಾಹಿತ್ಯದ ಮೇಲೆ ಬೆಳಕು ಚೆಲ್ಲುವ ಲೇಖನಗಳು ಅಷ್ಟಾಗಿ ಪ್ರಕಟಗೊಂಡಿಲ್ಲ. ೧೯ನೇ ಶತಮಾನದ ಮಧ್ಯದಲ್ಲಿ ಯುರೋಪದಿಂದ ಭಾರತಕ್ಕೆ ಬಂದು ನೆಲೆಸಿದ ಕ್ರೈಸ್ತ ಮಿಷನರಿಗಳು ತಮ್ಮ ಧರ್ಮಪ್ರಸಾರಕ್ಕಾಗಿ ಮಕ್ಕಳಿಗೆ ಕಲಿಸಲು ಸಾಹಿತ್ಯ ನಿರ್ಮಿಸಿದರು. ಶಾಲಾ ಶಿಕ್ಷಣದಲ್ಲಿ ಅಳವಡಿಸಿದರು.

ಹೀಗೆ ಪುಸ್ತಕ ರೂಪದಲ್ಲಿ ಮಕ್ಕಳ ಸಾಹಿತ್ಯವು ಪ್ರಚಾರ ಪಡೆಯಿತು. ಮಕ್ಕಳ ಪ್ರಪಂಚ ಹಿರಿಯರ ಪ್ರಪಂಚಕ್ಕಿಂತ ವಿಭಿನ್ನ. ಅದೊಂದು ಪ್ರತ್ಯೇಕ ಲೋಕ. ಅಲ್ಲಿ ಪ್ರಾಣಿ-ಪಕ್ಷಿಗಳು, ಬೆಟ್ಟ-ಗುಡ್ಡ, ನದಿ-ಹಳ್ಳ ಕೊಳ್ಳಗಳು, ಸೂರ್ಯಚಂದ್ರ, ನಕ್ಷತ್ರ ಮೋಡಗಳು, ಗುಡುಗು-ಸಿಡಿಲು, ಮಿಂಚುಗಳು, ಎಲ್ಲವೂ ಮಕ್ಕಳೊಂದಿಗೆ ಮುದ್ದಾಗಿ ಮಾತನಾಡುತ್ತವೆ. ವಿವಿಧ ಕವನಗಳು, ಕಥೆಗಳು, ಸುತ್ತಲಿನ ನಿಸರ್ಗ, ಅಲ್ಲಿ ಮೂಡುವ ಕುತೂಹಲ ಮಕ್ಕಳ

ಮನ ತಣಿಸುತ್ತವೆ. ಕಲ್ಪನೆ ಅರಳಿಸುತ್ತದೆ. ಮಕ್ಕಳ ಮನಸ್ಸು ತರ್ಕಬದ್ಧವಾಗಿ ಆಲೋಚಿಸುತ್ತದೆ. ಪ್ರಶ್ನಿಸುತ್ತದೆ. ಮಕ್ಕಳು ತಾವೇ ಹಾಡಾಗಿ ಹಕ್ಕಿಯಾಗುತ್ತವೆ.

ಮಕ್ಕಳ ಬರಹಗಳಲ್ಲಿ ವ್ಯಕ್ತವಾಗಿರುವ ಭಾವ, ವಿಚಾರ, ಮಕ್ಕಳ ಗ್ರಹಿಕೆಗೆ ನಿಲುಕುವಂತಿರಬೇಕು. ಭಾವ ವಿಚಾರ ಕಲ್ಪನೆಗಳ ಜತೆಜತೆಗೆ ಬಳಸುವ ಭಾಷೆ ಆದಷ್ಟು ಸರಳವಿರಬೇಕು. ಪದಗಳ ಗಾತ್ರ, ವಾಕ್ಯಗಳ ಗಾತ್ರ ಚಿಕ್ಕದಿರಬೇಕು. ಮಕ್ಕಳಿಗಾಗಿ ಬರೆದ ಪದ್ಯ ಲಯಬದ್ಧವಾಗಿರಬೇಕು. ಹಾಡಲು ಸುಲಭವಾಗಿರಬೇಕು.

ಇಂತಹ ಪದ್ಯಗಳನ್ನು ರಚಿಸಿ ಮಕ್ಕಳ ಮನಮುಟ್ಟಿಸುವಲ್ಲಿ ಉತ್ತರ ಕರ್ನಾಟಕದ ಮಕ್ಕಳ ಸಾಹಿತಿಗಳಾದ ಸಿ.ಸು. ಸಂಗಮೇಶ, ಕಂಚ್ಯಾಣಿ ಶರಣಪ್ಪ, ಪ.ಗು. ಸಿದ್ಧಾಪೂರ, ಹ.ಮ. ಪೂಜಾರ, ಜಯವಂತ ಕಾಡದೇವರ, ಎಂ.ಡಿ. ಗೋಗೇರಿ, ಈಶ್ವರ ಕಮ್ಮಾರ ಇಂತಹ ಸಾಹಿತಿಗಳ ಸಾಲಿನಲ್ಲಿ ಗುರುತಿಸಿಕೊಂಡಿರುವ ಪ್ರೊ. ಸಂಗಮೇಶ ಗುಜಗೊಂಡರು ಒಬ್ಬರು. ಇವರು ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಕೊಟ್ಟ ಕೊಡುಗೆ ಅಪಾರವಾದುದು. ವಿದ್ಯಾರ್ಥಿಗಳು ಒಳ್ಳೆಯ ವ್ಯಕ್ತಿಗಳಾಗಬೇಕಾದರೆ ಶಾಲೆಯ ಬಗ್ಗೆ ಪ್ರೀತಿ ಮತ್ತು ಕಾಳಜಿಗಳು ಇರಬೇಕು. ಗುರುಗಳ ಬಗ್ಗೆ ಭಕ್ತಿ ಮತ್ತು ಗೌರವ ಇರಬೇಕು. ಅಂದಾಗಲೇ ವಿದ್ಯೆ ಲಭಿಸುತ್ತದೆ ಎಂಬುದನ್ನು ಪ್ರೊ. ಸಂಗಮೇಶ ಗುಜಗೊಂಡರು ಬರೆದಿದ್ದಾರೆ.

ಪ್ರೀತಿಯ ಗುರುವಿಗೆ
ಎಳೆಯರ ಕಾಣಿಕೆ
ಗುರುವಿನ ಇಚ್ಛೆಗೆ ಅನುಗುಣವು
ಒಬ್ಬರೊಂದೊಂದು
ಪುಸ್ತಕ ಕೊಡುಗೆ
ಗುರುವಿಗೆ ಅದುವೇ ಸಂತಸವು

ಗುರುಗಳ ಹುಟ್ಟು ಹಬ್ಬಕೆ ಬೇರೆ ಕಾಣಿಕೆ ನೀಡದೇ ಪುಸ್ತಕಗಳನ್ನು ಕಾಣಿಕೆಯಾಗಿ ನೀಡಬೇಕು. ಬೇರೆ ವಸ್ತು ಪಡೆಯದೇ ಪುಸ್ತಕ ಪಡೆಯುವ ಇಚ್ಛೆ ಗುರುಗಳದ್ದು ಆಗಿರಬೇಕು. ಮುಂದಾದರೂ ವಿದ್ಯಾರ್ಥಿಗಳು ಮತ್ತು ಗುರುಗಳು ಹೀಗೆ ನಡೆದುಕೊಳ್ಳಲಿ ಎಂಬ ಭಾವನೆಯನ್ನು ತಮ್ಮ ಕವಿತೆಯಲ್ಲಿ ವ್ಯಕ್ತಪಡಿಸಿದ್ದಾರೆ.

ಸಂಗಮೇಶ ಗುಜಗೊಂಡರು ಗ್ರಾಮೀಣ ಪ್ರದೇಶದ ರೈತ ಕುಟುಂಬದಲ್ಲಿ ಜನಿಸಿ ಬಂದವರು. ಅವರು ಚಿಕ್ಕಂದಿನಿಂದಲೇ ಗ್ರಾಮೀಣ ಪ್ರದೇಶದ ಜಾನಪದದ ಪ್ರಭಾವ ಇವರ ಮೇಲೆ ಬೀರಿದೆ. ಹೀಗಾಗಿ ತಮ್ಮ ಮನೆಯಲ್ಲಿ ತಾಯಿಯು ಅಳುವ ಕಂದಮ್ಮನನ್ನು ಸಮಾಧಾನ ಪಡಿಸಲು ಹಾಡುವ ಲಾಲಿ ಹಾಡುಗಳು, ಬೀಸುವ ಹಾಡುಗಳು, ಕುಟ್ಟುವ ಹಾಡುಗಳು, ಇವುಗಳನ್ನು ತಾಯಿ ಹಾಡಿದ್ದರಿಂದ ಗುಜಗೊಂಡರು ಇಂತಹ ಕವಿತೆಗಳು ರಚಿಸಲು ಸಾಧ್ಯವಾಗಿದೆ. ವಿಜಯಪೂರ ಜಿಲ್ಲೆಯ ಅನೇಕ ಮಕ್ಕಳ ಕವಿಗಳು ಮೂಲತಃ

ಗ್ರಾಮೀಣ ಪ್ರದೇಶದಿಂದಲೇ ಬಂದವರು. ಅದರಲ್ಲೂ ಪ್ರಾಥಮಿಕ, ಮಾಧ್ಯಮಿಕ, ಕಾಲೇಜು, ಶಿಕ್ಷಕರಾಗಿದ್ದುಕೊಂಡು ವೃತ್ತಿಯಿಂದ ಶಿಕ್ಷಕರಾಗಿದ್ದುಕೊಂಡು ಪ್ರವೃತ್ತಿಯಿಂದ ಮಕ್ಕಳ ಸಾಹಿತ್ಯ ಕೃಷಿ ಮಾಡಿಕೊಂಡವರು. ಮಕ್ಕಳ ಸಾಹಿತ್ಯದ ಮುಂಚೂಣಿಯಲ್ಲಿದ್ದವರು ಶಂ.ಗು. ಬಿರಾದಾರ, ಈಶ್ವರಚಂದ್ರ ಚಿಂತಾಮಣಿ, ಕಂಚಾಣಿ ಶರಣಪ್ಪ, ಸಿ.ಸು. ಸಂಗಮೇಶ, ಫ.ಗು. ಸಿದ್ದಾಪೂರ, ಸಿಂಪಿ ಲಿಂಗಣ್ಣ, ಹ.ಮ. ಪೂಜಾರ ಮೊದಲಾದವರು ಪ್ರಮುಖರಾಗಿದ್ದಾರೆ. ಅವರ ಸಾಲಿನಲ್ಲಿ ಎದ್ದು ಕಾಣುವ ಬಹುಮುಖ ವ್ಯಕ್ತಿತ್ವವುಳ್ಳ ಸಂಗಮೇಶ ಗುಜಗೊಂಡರು.

'ಸುಗ್ಗಿ ಹಿಗ್ಗು ಚೈತ್ರ ಮೊಗ್ಗು
ಮನವ ಕುಣಿಸಿ ಬಿಟ್ಟಿದೆ
ಬನವ ಸುತ್ತಿ ಗಿರಿಯ ಹತ್ತಿ
ನಲಿವ ಆಸೆ ಹಚ್ಚಿದೆ'

ಎಂಬ ಮಕ್ಕಳ ಭಾವಕ್ಕೆ ತಕ್ಕಂತೆ ಭಾಷೆ ಇಲ್ಲಿದೆ. ಚೈತ್ರದ ಸೊಬಗು ನೋಡಲು ಚಂದ ಮತ್ತು ಬದುಕಿಗೆ ಉಪಯುಕ್ತ ಎಂಬ ಮಾತುಗಳನ್ನು ತಿಳಿಸಲು ಸಂಗಮೇಶ ಗುಜಗೊಂಡರು ಕಿಟ್ಟ ಸಸಿಯ ನೆಟ್ಟನು, ಅಜ್ಜನ ಊರು, ಮರ ಬೆಳೆಸೋಣ ಬನ್ನಿ, ಮತ್ತೆ ಬಂತು ಚೈತ್ರ ಕವಿತೆಗಳನ್ನು ಬರೆದಿದ್ದಾರೆ. ಮರಗಳನ್ನು ಬೆಳೆಸಿದರೆ ಮನುಜ ಕುಲಕ್ಕೆ ಸುಖ ಶಾಂತಿ ಸಮಾಧಾನ ಸಿಗುತ್ತದೆ ಎಂಬುದನ್ನು ಇಲ್ಲಿ ಹೇಳಲಾಗಿದೆ. ಭಾರತ ದೇಶ ಹಳ್ಳಿಗಳ ದೇಶ, ಗ್ರಾಮಗಳಲ್ಲಿಯ ಸ್ವಚ್ಛಂದತೆ, ಪ್ರಾಮಾಣಿಕತೆ ಮತ್ತು ಆನಂದತೆ, ನಗರಗಳಲ್ಲಿ ಇಲ್ಲ. ಆದ್ದರಿಂದ ಶಾಲೆಯ ಮಕ್ಕಳು ರಜಾದಿನಗಳಲ್ಲಿ ಅಜ್ಜ-ಅಜ್ಜಿ ಊರುಗಳಾದ ಹಳ್ಳಿಗಳಿಗೆ ಹೋಗಬೇಕು. ಅಲ್ಲಿ ಆಡಿ ಆನಂದ ಪಡಬೇಕು ಎಂಬ ನೀತಿಯನ್ನು ಹೇಳಲು ಪುಟ್ಟನ ರಜಾ ದಿನ, ಸಂಜೆಯ ಸೊಬಗು, ಬೇಸಿಗೆಯ ಮೋದ, ಬೇಸಿಗೆ ರಜೆ ಸುರುವಾಯ್ತು, ಬೇಸಿಗೆ ಬರಲು ಬಿಡುವಿನ ಬಿನ್ನಾಣ, ಬೆಟ್ಟಕ್ಕೆ ಚಾರಣ, ಮಳೆಗಾಲದ ಮೋದ, ಜಗದ ಹಬ್ಬ ಹೀಗೆ ಮುಂತಾದ ಕವಿತೆಗಳನ್ನು ಸಂಗಮೇಶ ಗುಜಗೊಂಡರು ರಚಿಸಿದ್ದಾರೆ.

ಸಂಗಮೇಶ ಗುಜಗೊಂಡರು ಭೂಗೋಳಶಾಸ್ತ್ರದ ಪ್ರಾಧ್ಯಾಪಕರಾಗಿ ಪ್ರವೃತ್ತಿಯಿಂದ ಮಕ್ಕಳ ಸಾಹಿತ್ಯದಲ್ಲಿ ತೊಡಗಿಸಿಕೊಂಡಿರುವ ಇವರು ಜೀವನದಲ್ಲಿ ಏನನ್ನಾದರೂ ಸಾಧಿಸಬೇಕೆಂಬ ಹಂಬಲದಿಂದ ಅವಿರತ ಪ್ರಯತ್ನದಿಂದ ಇವರು ಸಾದಾ, ಸರಳ, ಸಜ್ಜನಿಕೆಯ ವ್ಯಕ್ತಿಗಳಾಗಿ, ಆಡಂಬರವಿಲ್ಲದ ಬದುಕು ಸಾಗಿಸುತ್ತಿದ್ದಾರೆ. ಮಕ್ಕಳ ಸಾಹಿತ್ಯ ಕ್ಷೇತ್ರಕ್ಕೆ ಹಲವಾರು ಕೃತಿಗಳನ್ನು ಕಾಣಿಕೆಯಾಗಿ ನೀಡಿದ್ದಾರೆ. ಒಳ್ಳೆಯ ಕಾಯಕದೊಂದಿಗೆ ಮಕ್ಕಳ ಮನಸ್ಸುಗಳನ್ನು ಅರಿತುಕೊಂಡು ಮಕ್ಕಳ ಬೇಸಿಗೆ ಶಿಬಿರಗಳಿಗೆ ಮಕ್ಕಳ ಸಾಹಿತ್ಯ ಕಮ್ಮಟಗಳಿಗೆ ಹೋಗಿ ಮಕ್ಕಳಿಗೆ ಮಾರ್ಗದರ್ಶನ ಮಾಡಿದ್ದಾರೆ. ಇವರು ಓದಿದ್ದು ಭೂಗೋಳಶಾಸ್ತ್ರ, ಮಾಡುತ್ತಿರುವುದು ಪದವಿ ಕಾಲೇಜಿನ ಭೂಗೋಳ ವಿಷಯದ ಉಪನ್ಯಾಸಕ ವೃತ್ತಿ. ಇವರ ಬಾಲ್ಯಜೀವನದ ಅನುಭವದಿಂದಲೇ ಮಕ್ಕಳ ಸಾಹಿತ್ಯದ ಬಗ್ಗೆ

ಆಸಕ್ತಿ ಬೆಳೆಸಿಕೊಂಡರು. ಮಕ್ಕಳ ಮನಸ್ಸು ಅರಿತುಕೊಂಡು ಮಕ್ಕಳ ಸಾಹಿತ್ಯ ರಚಿಸುವಲ್ಲಿ ಯಶಸ್ವಿಯಾದವರು. ಜೀವನದ ಸೊಗಡು, ಆಸೆ-ಆಕಾಂಕ್ಷೆಗಳು, ಭಾವ-ಭಾಷೆಗಳನ್ನು ತಮ್ಮ ಕವಿತೆಗಳಲ್ಲಿ ಸೆರೆ ಹಿಡಿದಿದ್ದಾರೆ.

'ಮತ್ತೆ ಬಂತು ಚೈತ್ರ'ವು ಈ ಕಾವ್ಯ ಸಂಕಲನದಲ್ಲಿ ಮಕ್ಕಳ ದೃಷ್ಟಿಯಿಂದಲೇ ಕಟ್ಟಲ್ಪಟ್ಟು ಅವರ ಭಾವಲಹರಿಯಂತೆಯೇ ಮೂಡಿ ಬಂದಿವೆ. ಪ್ರಾಸ ಮತ್ತು ಲಯಬಂಧ ಮಕ್ಕಳ ಪದ್ಯಗಳ ಜೀವಾಳವೇ ಆಗಿವೆ. ಮಕ್ಕಳ ಹೃದಯವು ನಾದವನ್ನು ಹಿಡಿಯುವಂತಹವು. ಅವರ ಕಿವಿಗೆ ಸವಿಯಾಗುವ ಸದೃಡವಾದ ಒಂದು ರೀತಿಯ ಲಲಿತ ಮಧುರವಾದ ಪ್ರಾಸಮಯತೆ ಅವರಿಗೆ ಬೇಕು. 'ಮತ್ತೆ ಬಂದು ಚೈತ್ರ' ಸಂಕಲನದಲ್ಲಿಯ ಪದ್ಯಗಳು ಸುಮ್ಮನೆ ಹಾಡಿಕೊಂಡಾಗ ಅದಕ್ಕೆ ಮಕ್ಕಳು ಹೆಜ್ಜೆ ಹಾಕಿ ಕೈತಟ್ಟಿ ಕುಣಿಯುವಂತೆ ಅನಿಸುವಂತಿದೆ. ಚೈತ್ರ ಬಂತು ಪದ್ಯದಲ್ಲಿಯ ಪಿಕ, ಹೊಂಗೆ, ಬನ ಇಂತಹ ಲಾಕ್ಷಣಿಕ ಅಂಶಗಳು ಮಕ್ಕಳ ಬುದ್ಧಿಗೆ ನಿಲುಕುವಂತೆ ಇವೆ.

ಪುಟ್ಟ ಸಸಿಯ ನೆಟ್ಟು ಕಿಟ್ಟ
ಹರುಷ ತಾನು ಪಟ್ಟನು
ಮೇಲೆ ಗೊಬ್ಬರವ ಹಾಕಿ
ಸುತ್ತ ಬೇಲಿ ಇಟ್ಟನು

ಈ ಪದ್ಯವನ್ನು ಪರಿಸರಕ್ಕೆ ಪೂರಕ ಎಂಬುದನ್ನು ಎಳೆಯ ಮನಸ್ಸುಗಳಿಗೆ ನೀಡಿರುವ ಸಂದೇಶವಾಗಿದೆ.

ಪಡುವಣ ಪರದೆಗೆ ಬಣ್ಣವ ಬಳಿಯುತ
ಸಂಜೆಯು ಸೊಬಗನು ಹರಡುವದು
ಚಿನ್ನದ ಚಾಪೆಯ ಹಾಸಿದ ಹಾಗೆಯೆ
ಆಗಸದಂಗಳ ಮಿಂಚುವದು

ಸಂಗಮೇಶ ಗುಜಗೊಂಡರು 'ಸಂಜೆಯ ಸೊಬಗು' ಕವನವನ್ನು ಸುಂದರವಾಗಿ ವರ್ಣಿಸಿದ್ದಾರೆ. 'ಕಂಪಿನ ಕಿರಣವು ಚಿಮ್ಮಿದ ಚಿತ್ರವು ಲೋಕದ ಏಕತೆ ಸಾರುವುದು' ಎನ್ನುವ ಕವಿ 'ಜಗವೆಲ್ಲ ಒಂದು ನಾವೆಲ್ಲ ಬಂಧು' ಎಂಬ ವಿಶಾಲ ಭಾವ ಮನಸ್ಸಿಗೆ ಹಿತವೆನಿಸುವುದು.

ಇಲ್ಲಿ ಮಕ್ಕಳ ಸಾಹಿತ್ಯದ ಬೆಳೆಯನ್ನು ಹುಲುಸಾಗಿ ಬೆಳೆಯಲು ಸಂಗಮೇಶ ಗುಜಗೊಂಡರು ಅನೇಕ ಬಗೆಯ ಮಕ್ಕಳ ಪದಪ್ರಯೋಗಗಳನ್ನು ಬಳಸಿ ಮಕ್ಕಳ ಮನೋವಿಕಾಸಕ್ಕೆ ಅನುಗುಣವಾಗುವ ಸಾಹಿತ್ಯ ರಚಿಸಿರುವುದು ಸ್ತುತ್ಯಾರ್ಹವಾಗಿದೆ. ಇವರ ಕೃತಿಗಳಲ್ಲಿ ಪರಿಸರದಲ್ಲಿಯ ಬದಲಾವಣೆ, ಪಶು-ಪಕ್ಷಿಗಳ ಆಟ-ಪಾಠಗಳ, ನೋವು-

ನಲಿವುಗಳ ಒಡನಾಟದ ಪ್ರೀತಿ–ವಾತ್ಸಲ್ಯ, ಕರುಣೆ ಇವರ ಕವಿತೆಗಳಲ್ಲಿ ಹೊರಹೊಮ್ಮಿ ಅರಳಿವೆ.

'ಪರಿಸರ ಮಹತಿಯ ಅರಹುವ ದಿನವಿದು
ಬನ್ನಿರಿ ಗೆಳೆಯರೆ ಕೂಡೋಣ
ವಿಶ್ವದ ಎಲ್ಲೆಡೆ ಈ ದಿನ ಚಿಂತನ
ನಾವೂ ಚರ್ಚೆಯ ನಡೆಸೋಣ

ಧರಣಿಯು ಪೂಜ್ಯವು ಎಲ್ಲಾ ಭಾಗ್ಯವ
ನಮ್ಮಯ ಬದುಕಿಗೆ ನೀಡಿಹುದು
ಧರಣಿಯ ರೂಪವ ಕೆಡಿಸದೆ ಬದುಕಲು
ಭೂಮಿಯೇ ಸ್ವರ್ಗ ಆಗುವುದು'

ಭೂಮಿಗೆ ಏನಾಯಿತು ನೋಡೋಣ ಕವಿತೆ ಒಂದು ಸಮಗ್ರ ಪ್ರಬಂಧದ ವಿಸ್ತಾರವನ್ನೂ ಜ್ವಲಂತ ಸಮಸ್ಯೆಯ ವಸ್ತುವನ್ನೂ ಹೊಂದಿ ಕಾಡುವ ಪದ್ಯವಾಗಿದೆ. ಆದರೆ ರಚನೆಯಲ್ಲಿ ಕೆಲವೆಡೆ ಮಾತ್ರೆಗಳು ಹೆಚ್ಚುಕಡಿಮೆ ಆಗಿ ಮಕ್ಕಳು ಸರಾಗವಾಗಿ ಹಾಡಿಕೊಳ್ಳುವ ಗತಿಗೆ ತುಸು ಅಡಚಣೆಯಾಗಿರುವುದುಂಟು. ಉದಾಹರಣೆಗೆ ಸದರಿ ಕವಿತೆಯ ಎಂಟನೆಯ ಸಾಲು 'ಪರಿಸರ ಹಾನಿಯ ಕರಾಮತ್ತು' ಬದಲಿಗೆ 'ಪರಿಸರ ನಾಶದ ಆಪತ್ತು' ಎಂದಿದ್ದರೆ ನಡೆಯುತ್ತಿತ್ತು. ಆದರೆ ಕವಿಯ ಮನಸ್ಸಿನಲ್ಲಿರುವ ಕರಾಮತ್ತು ಪದದ ಅರ್ಥವ್ಯಾಪ್ತಿ 'ಆಪತ್ತು' ಪದಕ್ಕಿಲ್ಲ ಎನ್ನುವುದು ಗೊತ್ತು. ಅತ್ಯುತ್ತಮ ಮಕ್ಕಳ ಪದ್ಯಗಳನ್ನು ಕಟ್ಟಿಕೊಡುವಲ್ಲಿ ಸಂಗಮೇಶ ಗುಜಗೊಂಡರ ಸಾಧನೆ ಮೆಚ್ಚುವಂತಹದ್ದು.

ಸಂಗಮೇಶ ಗುಜಗೊಂಡರ ಮಕ್ಕಳ ಕವಿತೆಗಳು ಮಕ್ಕಳ ಮನಸ್ಸಿನಲ್ಲಿರುವ ಕ್ರಿಯಾಶೀಲತೆಯನ್ನು, ಸೃಜನಶೀಲತೆಯನ್ನು ಬೆಳೆಸುವ ಸಾಹಸ ಪ್ರವೃತ್ತಿ ಕುತೂಹಲ ಕೆರಳಿಸುವ ಸಾಹಸಮಯ ವಿಷಯಗಳು ಸುಂದರವಾಗಿ ಹಣೆದುಕೊಂಡಿವೆ. ಇವರ ಕವಿತೆಗಳಲ್ಲಿ ನಾಲ್ಕು ಸಾಲಿನ ಪುಟ್ಟ ಪುಟ್ಟ ಸಾಲುಗಳು, ಹಾಗೂ ಪ್ರಾಸ, ಲಯಬದ್ಧತೆಯನ್ನು ಒಳಗೊಂಡ ನಿಸರ್ಗ ಕವಿತೆಗಳು, ದೇಶಾಭಿಮಾನ ಕವಿತೆಗಳು, ಸಾಮಾಜಿಕ ಕವಿತೆಗಳು, ಸಂಗಮೇಶ ಗುಜಗೊಂಡರ ಕಾವ್ಯಗಳಲ್ಲಿ ಮೂಡಿಬಂದಿವೆ.

'ಸುತ್ತಲೂ ಗಿಡಮರ ಇರುತಿಹ ಪರಿಸರ
ನಂದನವನವೇ ಆಗಿಹುದು
ಕಣ್ಮನ ಸೆಳೆಯುವ ಹಸುರಿನ ಬಳಗವು
ಪ್ರತಿದಿನ ಹಿತಕರ ಎನಿಸಿಹುದು'

ಸಂಗಮೇಶ ಗುಜಗೊಂಡರು ಒಬ್ಬ ಕೃಷಿಕನ ಮಗನಾಗಿ ಭೂಗೋಳಶಾಸ್ತ್ರದ ಪದವೀಧರನಾಗಿ ಸ್ವತಃ ಭೂಮಂಡಲ ಪ್ರಕಾಶನದಡಿಯಲ್ಲಿ ಪರಿಸರ ಪ್ರೇಮ ಉಕ್ಕಿಸುವ ಈ

ತೆರನಾದ ಮಕ್ಕಳ ಪದ್ಯಗಳನ್ನು ರಚಿಸಿ ಪ್ರಕಟಿಸಿರುವುದು ಒಂದು ಹೆಗ್ಗಳಿಕೆಯೆಂದೇ ಹೇಳಬೇಕು. ಅವರ ಪರಿಸರದ ಪ್ರೀತಿ ಅನನ್ಯವಾದುದು. ಇದೂ ಒಂದು ರೀತಿಯಲ್ಲಿ ನಾವು ಭೂಮಿಯ ಋಣ ತೀರಿಸಿದಂತಲ್ಲವೇ?

ಬಿರು ಬಿರು ಬಿಸಿಲಿನ ಬೇಸಿಗೆ ಕಳೆದಿದೆ
ಈಗಲೇ ಬಂದಿದೆ ಮಳೆಗಾಲ
ಸುತ್ತಲು ಕವಿದಿದೆ ಕಪ್ಪನೆ ಮೋಡವು
ಸುರಿಸುತ ಧರೆಗೆ ಜೀವಜಲ...

ಈ ಪದ್ಯದ ಸಾಲುಗಳಲ್ಲಿ ಮಳೆಗಾಲ ಮತ್ತು ಬೇಸಿಗೆಕಾಲಗಳ ಸ್ಪರ್ಶ ಸುಖ ಅನುಭವಿಸುವ ಅನುಭವಾಮೃತವನ್ನು ಮನತಟ್ಟುವಂತೆ ಕಟ್ಟಿಕೊಟ್ಟಿದ್ದಕ್ಕೆ ಭೇಷ್ ಅನ್ನಲೇಬೇಕು.

ಮಕ್ಕಳ ಪ್ರೀತಿಸುವುದಾದರೆ ಚಾಚಾ ನೆಹರೂನಂತೆ ಪ್ರೀತಿಸಬೇಕು ಎಂಬುದನ್ನು ಹೇಳಲು ಚಾಚಾ ನೆಹರು ಅವರ ಕುರಿತೇ ಬರೆದ ಪದ್ಯ ಇಲ್ಲಿದೆ.

ಗೆಳೆಯರ ಹಾಗೆಯೇ
ಎಳೆಯರ ಪ್ರೀತಿಸಿ
ನೆಹರು ಪಡೆದನು ಚಾಚಾಪಟ್ಟ

ಭಾರತದ ಮೊದಲ ಪ್ರಧಾನಿ ಎನಿಸಿಕೊಂಡ ಪಂಡಿತ ಜವಾಹರಲಾಲ ನೆಹರು ಅವರು ಮಕ್ಕಳನ್ನು ತುಂಬಾ ಪ್ರೀತಿಸುತ್ತಿದ್ದರು. ಅವರು ಕೊಟ್ಟ ಪ್ರೀತಿಯ ಗುಲಾಬಿಹೂವು ತಮ್ಮ ಕಿಸೆಯಲ್ಲಿ ಇಟ್ಟುಕೊಳ್ಳುತ್ತಿದ್ದರು.

ಜನ್ಮತಾಯಿ ಭಾರತಿ ಬೆಳಗುತಿಹೆವು ಆರತಿ
ಜಗದಲಿ ನಿನಗಿಹುದು ಹಿರಿಯದಾದ ಕೀರುತಿ

ಸಂಗಮೇಶ ಗುಜಗೊಂಡರು ಭಾರತ ದೇಶದ ಅಭಿಮಾನದ ಕುರಿತು ಈ ಕವಿತೆಯಲ್ಲಿ ಅವರು ಹೃದಯತುಂಬಿ ಗೌರವದಿಂದ ಹೀಗೆ ಹೇಳಿದ್ದಾರೆ. ನಾನು ಹುಟ್ಟಿದ ಊರು-ದೇಶ ಬಹಳ ಮುಖ್ಯವಾದುದು. ಅವುಗಳನ್ನು ಮರೆಯಬಾರದು ಎಂದು ಹೇಳಲು ತಾಯಿ ಭಾರತಿಗೆ ಆರತಿ ಎಂಬ ಮಾತನ್ನು ಭವ್ಯ ಭಾರತವನ್ನು ಮನದುಂಬಿ ಹೊಗಳಿದ್ದಾರೆ.

ಒಟ್ಟಾರೆ ಸಂಗಮೇಶ ಗುಜಗೊಂಡರು ಅವರು ಉತ್ತಮ ಕವಿತೆಗಳನ್ನು ಬರೆಯುವಲ್ಲಿ ಸಿದ್ಧಹಸ್ತರು. ಅವರ ಬರವಣಿಗೆಯ ಶೈಲಿ ಸರಳವಾಗಿದೆ, ಅರ್ಥಪೂರ್ಣವಗಿದೆ. ಹೆಚ್ಚಾಗಿ ರಜಾ ದಿನಗಳೇ ಕವಿತೆಯ ವಸ್ತುಗಳಾಗಿವೆ.

ಬಾಲ್ಯದ ನೆನಪುಗಳನ್ನು ಯಾರು ನೆನಪಿಸಿಕೊಂಡು ಮೆಲುಕಾಡಿಸುವರೋ ಅವರು ಮಾತ್ರ ಕವಿಯಾಗಬಲ್ಲರು ಎಂಬುದಾಗಲಿ, ಶಿಕ್ಷಕರೇ ಮಕ್ಕಳ ಸಾಹಿತ್ಯವನ್ನು ಉತ್ತಮವಾಗಿ

ರಚಿಸಲು ಸಾಧ್ಯವೆಂಬುದಾಗಲಿ ನಿರ್ವಿವಾದ. ಇದಕ್ಕೆ ಮಕ್ಕಳ ಒಡನಾಟವೇ ಕಾರಣವಾಗಿರುತ್ತದೆ. ಈ ಮಾತು ಹೆಚ್ಚಾಗಿ ಮಕ್ಕಳ ಸಾಹಿತಿಗಳಿಗೆ ಅನ್ವಯಿಸುತ್ತದೆ. ಸಂಗಮೇಶ ಗುಜಗೊಂಡರು ತಮ್ಮ ಬಾಲ್ಯದ ಹಲವಾರು ನೆನಪುಗಳನ್ನು ತಮ್ಮ ಶಿಶುಕಾವ್ಯದಲ್ಲಿ ತೆರೆದುಕೊಂಡಿದ್ದಾರೆ. ತಂದೆ–ತಾಯಿಗಳು ಎಳೆಯ ಗೆಳೆಯರೊಡನೆ ಸವಿಧ ಅನುಭವಿಸಿದ ಆನಂದದ ಗಳಿಗೆಗಳನ್ನು ಕಾವ್ಯದುದ್ದಕ್ಕೂ ಹೆಣೆದಿದ್ದಾರೆ. ಆಡುನುಡಿಯ ಬೆಡಗಿನಲ್ಲಿ ಒಡಮೂಡಿಸಿದ್ದಾರೆ. ಪರಿಸರದ ಬಗ್ಗೆ ಹೆಚ್ಚು ಕಾಳಜಿ ತೋರಿಸಿದ್ದಾರೆ. ತಮ್ಮ ಕವಿತೆಗಳಲ್ಲಿ ಪ್ರಕೃತಿಯ ಸೊಬಗನ್ನು ಹಿಡಿಯಲು ಪ್ರಯತ್ನಿಸಿದ್ದಾರೆ. ಇಲ್ಲಿಯ ವರ್ಣನೆ ಸಂತಸವನ್ನಷ್ಟೇ ನೀಡುವುದಿಲ್ಲ. ಮಕ್ಕಳಲ್ಲಿ ಪ್ರಕೃತಿಯ ಬಗೆಗೆ ಪ್ರೀತಿಯನ್ನು, ಬಾಂಧವ್ಯವನ್ನು ಬೆಳೆಸುತ್ತದೆ.

'ಭೂಮಿ ತುಂಬ
ಹಸಿರೆ ಹಸಿರು
ಇದುವೆ ಭವ್ಯ ನಂದನ
ಸ್ವಚ್ಛಗಾಳಿ
ಶುದ್ಧ ನೀರು
ಚಂದ ಇಲ್ಲಿ ಜೀವನ'

ಹಸಿರಿನ ನಂದನದ ಸೊಬಗನ್ನು ಹೇಳುತ್ತಲೇ ಸ್ವಚ್ಛಗಾಳಿ, ಶುದ್ಧನೀರು, ಈ ಕವಿತೆ ಇವುಗಳನ್ನು ಪರಿಚಯಿಸುತ್ತದೆ. ಇಲ್ಲಿ ವಾಯುಮಾಲಿನ್ಯ, ಜಲಮಾಲಿನ್ಯ, ಹೆಚ್ಚುತ್ತಿರುವ ಕಾಲದಲ್ಲಿ ಪರ್ಯಾಯವಾಗಿ ಪರಿಶುದ್ಧತೆಯ ಕಡೆಗೆ ಬೆರಳು ಮಾಡಿ ತೋರಿಸುವ ರೀತಿ ಮೆಚ್ಚುವಂತಹದ್ದು. ಸಂಗಮೇಶ ಗುಜಗೊಂಡರು ಪ್ರಾಥಮಿಕ ಶಾಲೆಯಲ್ಲಿ ಇದ್ದಾಗ ಸೂಳೆಭಾವಿ ಎಂಬ ಪ್ರಧಾನ ಗುರುಗಳು ಇದ್ದರು. ಅವರು ಪ್ರತಿ ಶುಕ್ರವಾರ ಮಧ್ಯಾಹ್ನದ ವೇಳೆ ಒಂದರಿಂದ ಏಳನೆಯ ತರಗತಿಯ ಎಲ್ಲಾ ಮಕ್ಕಳನ್ನೂ ಒಂದೆಡೆ ಕೂಡಿಸಿ ಚರ್ಚಾಕೂಟ ಮತ್ತು ಕಥಾಕೂಟಗಳನ್ನು ನಡೆಸುತ್ತಿದ್ದರು. ಈ ಸಂದರ್ಭದಲ್ಲಿ ಪ್ರತಿಯೊಬ್ಬರು ಸರದಿಯ ಪ್ರಕಾರ ಒಂದು ಕಥೆ, ಹಾಡು, ಹಾಸ್ಯ ಹೇಳುತ್ತಿದ್ದರು. ಹೀಗೆ ಪ್ರತಿಯೊಬ್ಬರನ್ನು ಗುರುಗಳು ಹುರಿದುಂಬಿಸುತ್ತಿದ್ದರು. ಈ ರೀತಿಯಲ್ಲಿ ಸಂಗಮೇಶ ಗುಜಗೊಂಡರು ಮಕ್ಕಳ ಸಾಹಿತ್ಯ ಬರವಣಿಗೆಗೆ ಪ್ರಭಾವಿತರಾದರು. 'ಚಂದಮಾಮ'ದಂತಹ ಪತ್ರಿಕೆಗಳು ಸಹ ಬಾಲ್ಯದಲ್ಲಿ ಇವರ ಬರವಣಿಗೆಗೆ ಪ್ರೇರಣೆ ನೀಡಿವೆ ಎಂಬುದು ಗಮನಾರ್ಹ ಅಂಶವಾಗಿದೆ.

ಸಂಗಮೇಶ ಗುಜಗೊಂಡರ ಕವಿತೆಗಳಲ್ಲಿ ಗೇಯ, ಲಯ, ಪ್ರಾಸ, ರಂಜನಾತ್ಮಕ ಅಂಶಗಳು ಪ್ರಮುಖವಾಗಿವೆ. ಮಕ್ಕಳ ಸ್ವಭಾವ, ಅಭಿರುಚಿ ಅರಿತು ಅವರು ರಚಿಸಿದ ಕವಿತೆಗಳು ಎಲ್ಲರನ್ನು ಆಕರ್ಷಿಸಬಲ್ಲವು. ಮಕ್ಕಳ ಸಾಹಿತ್ಯ ಅಂದರೆ ಅವರ ಕುತೂಹಲವನ್ನು ವರ್ಧಿಸಿ, ಅವರನ್ನು ಆನಂದದಲ್ಲಿ ಮೀಯಿಸಿ, ಮಾನಸಿಕ ಮತ್ತು ಬೌದ್ಧಿಕ ಬೆಳವಣಿಗೆಯ ಮೂಲಕ ವ್ಯಕ್ತಿತ್ವ ರೂಪಿಸುವುದೇ ಮಕ್ಕಳ ಸಾಹಿತ್ಯ ಎಂದು ಹೇಳುತ್ತೇವೆ.

‘ರಟ್ಟೆಗೆ ರೆಕ್ಕೆಯ
ಸಿಕ್ಕಿಸಿಕೊಳ್ಳುವೆ
ಜೊತೆಯಿರು ಗಗನವ ಸುತ್ತೋಣ’

ಎಂಬ ಅರ್ಥಪೂರ್ಣವಾದ, ಪ್ರಗತಿಪರವಾದ ವಿಚಾರಗಳಿವೆ ಮತ್ತು ಭವ್ಯವಾದ ಕನಸುಗಳಿವೆ. ಮಕ್ಕಳ ಭಾವಕ್ಕೆ ತಕ್ಕಂತೆ ಭಾಷೆ ಇಲ್ಲಿದೆ.

ಮನುಷ್ಯ ಮಾನವನಾಗಬೇಕು. ಮಾನವೀಯ ಮೌಲ್ಯಗಳನ್ನು ಬೆಳೆಸಿಕೊಳ್ಳಬೇಕು. ಅತೀ ಆಸೆ, ಮೋಸತನ, ಅಪ್ರಾಮಾಣಿಕತೆ ಒಳ್ಳೆಯದಲ್ಲ. ನಾನು ಹುಟ್ಟಿದ ಊರು, ದೇಶ ಇವುಗಳ ಬಗ್ಗೆ ಹೆಮ್ಮೆಯಿಂದ ಹೇಳಬೇಕು. ಅವುಗಳನ್ನು ಮರೆಯಬಾರದು. ಇಂತಹ ಅಭಿಮಾನ ರಕ್ತಗತ ಮಾಡಿಕೊಳ್ಳಬೇಕು. ಸಂಗಮೇಶ ಗುಜಗೊಂಡರ ಕವಿತೆಗಳು ಸರಳವಾಗಿವೆ, ಅರ್ಥಸ್ಪಷ್ಟವಾಗಿವೆ.

‘ಚಿನ್ನದ ಹಬ್ಬದ ಗುರುತು’ ಮಗುವೇ ಗುರುವಿಗೆ ಪುಸ್ತಕದ ಕೊಡುಗೆ ಕೊಡುವಂತ ಸಿದ್ಧಿ, ಮಕ್ಕಳ ಆನಂದದ ಭರವಸೆಗೆ ಎಂದೂ ಕೈ ಕೊಡುವುದಿಲ್ಲ. ‘ತಾಯಿ ಭಾರತಿಗೆ ಆರತಿ’ ಕವನದಲ್ಲಿಯ ದೇಶಭಕ್ತಿ ಮಕ್ಕಳ ಅರಿವಿನ ಆಳವನ್ನು ಮೀರಿ ನಿಲ್ಲುವಂತದಲ್ಲ. ‘ಮರ ಬೆಳೆಸೋಣ ಬನ್ನಿ’ ಅಜ್ಜನ ಊರಿನಲ್ಲಿಯ ಪ್ರಕೃತಿ ಸೌಂದರ್ಯದ ಸೆಳೆತವೊಂದು ಎದೆ ತುಂಬುವ ಮಾನವೀಯ ಕಂಪಿನ ಕಾವವನ್ನು ಸೂಚಿಸುತ್ತದೆ. ‘ಬೇಸಿಗೆ ರಜೆ ಶುರುವಾಯ್ತು’ ಹಕ್ಕಿಯ ಸ್ವಾತಂತ್ರ್ಯದ ಅರಿವನ್ನು ಮಗುವಿನಲ್ಲಿ ಮೂಡಿಸುತ್ತದೆ. ಮತ್ತು ಮಕ್ಕಳ ಮನೋಗತವನ್ನು ಎಲ್ಲಿಯೂ ಕೈ ಬಿಡುವುದಿಲ್ಲ. ‘ಬೇಸಿಗೆ ಬರಲು’, ‘ಮಳೆಗಾಲದ ಮೋದ’ ಇಂದಿನ ಮಕ್ಕಳ ಮನಸ್ಥಿತಿಗೆ ತಟ್ಟುವಂತೆ ಹೇಳುವ ಮಿಡಿತ ತುಡಿತಗಳೆಲ್ಲಾ ಸಂಗಮೇಶ ಗುಜಗೊಂಡ ಅವರಿಗೆ ಕರಗತವಾಗಿದೆ.

‘ಶ್ರಮವು ಇರದೆ ಅನ್ನ ಪಡೆವ
ನಿನ್ನ ಚಾಳಿ ಕೆಟ್ಟದು
ದುಡಿದು ತಿನ್ನು ಪಡೆವೆ ಹಿಗ್ಗು
ಎಂದು ಇಲಿಯ ಒಯ್ದಿತು’

ಈ ಕವಿತೆಯಲ್ಲಿ ಶ್ರಮವು ಇರದೆ ಅನ್ನ ಪಡೆವ ನಿನ್ನ ಚಾಳಿ ಕೆಟ್ಟದು ಎಂಬ ಬುದ್ಧಿಮಾತು ಹದ್ದು ಇಲಿಗಳ ಸ್ವಭಾವದ ಹಿನ್ನಲೆಯಲ್ಲಿ ಪ್ರಕಟವಾಗಿದ್ದು, ನೇರವಾದ ಉಪದೇಶವೆನಿಸುವುದಿಲ್ಲ. ಇದೊಂದು ಸಹಜ ಸಂಭಾಷಣೆ. ಈ ಸಂಗ್ರಹದಲ್ಲಿ ಸಂಭಷಣೆಯುಳ್ಳ ಕವಿತೆಗಳೂ ಇವೆ. ಕಥನಾತ್ಮಕ ಕವಿತೆಗಳೂ ಇವೆ. ‘ಜಾಣಗುಬ್ಬಿ’, ‘ಕಿಟ್ಟು ಮತ್ತು ಗುಬ್ಬಿ’, ‘ಹದ್ದು ಹೇಳಿದ ಮಾತು’ ಇವುಗಳನ್ನು ನೋಡಬಹುದು. ಕಥೆ ಹೇಳುವ ಉದ್ದೇಶವೆಂದರೆ ಮಕ್ಕಳಿಗೆ ಸರಿಯಾದ ತಿಳುವಳಿಕೆ ಬರಲೆಂಬುದು.

ಸಾಹಿತ್ಯದ ವೈವಿಧ್ಯತೆಯಲ್ಲಿ ಮಕ್ಕಳ ಸಾಹಿತ್ಯಕ್ಕೆ ಒಂದು ವಿಶಿಷ್ಟ ಸ್ಥಾನ ಎಂದಿನಿಂದಲೂ ಇದೆ. ಆದರೆ ಮಕ್ಕಳ ಬುದ್ಧಿಶಕ್ತಿ, ಮನೋಸಾಮರ್ಥ್ಯ ಹಾಗೂ ಆಸಕ್ತಿಯನ್ನಾಧರಿಸಿ ರಚಿತವಾದ ಕೃತಿಗಳು ಜಗತ್ತಿನ ಸಾಹಿತ್ಯ ಪರಧಿಯಲ್ಲೇ ಕಡಿಮೆ ಪ್ರಮಾಣದಲ್ಲಿವೆ. ಚಿಣ್ಣರ ಬಗೆಗಿನ ಸಾತ್ವಿಕ ದೃಷ್ಟಿಕೋನ ಹಾಗೂ ಸಾಹಿತ್ಯ ಮನೋಭಿಲಾಷೆಯನ್ನು ಹೊಂದಿರುವ ಸಮಾಜ ಮಾತ್ರ ಅಂಥ ಮಾದರಿಯ ಸಾಹಿತ್ಯವನ್ನು ಸೃಷ್ಟಿಸುತ್ತದೆ. ಮಕ್ಕಳ ಸಾಹಿತ್ಯ ಎಷ್ಟು ಕಾಲ ಕಳೆದರೂ ತೀವ್ರ ಬದಲಾವಣೆಗೆ ಒಳಗಾಗದ ಸಾರ್ವಕಾಲಿಕ ಸಾಹಿತ್ಯ. ಒಂದೇ ವಸ್ತು ವಿಷಯವನ್ನು ಆಧರಿಸಿ ಅನೇಕರು ಬರೆದರೂ ಚರ್ವಿತ, ಚರ್ವಣ ಎನಿಸಿಕೊಳ್ಳುವುದಿಲ್ಲ. ಸರಳ ಸುಂದರತೆಯೊಂದಿಗೆ ಕುತೂಹಲ ಹಾಗೂ ರಂಜನೀಯ ಗುಣವನ್ನು ಪ್ರಧಾನವಾಗಿ ಹೊಂದಿರುವುದರಿಂದ ನಿತ್ಯನೂತನವೆನಿಸುತ್ತದೆ.

ಸಂಗಮೇಶ ಗುಜಗೊಂಡರು ಒಬ್ಬ ಪ್ರಾಧ್ಯಾಪಕರಾಗಿದ್ದುಕೊಂಡು ನಿಷ್ಠೆಯಿಂದ ಮಕ್ಕಳ ಕಲ್ಯಾಣದ ಚಿಂತನೆಯಲ್ಲಿ ತೊಡಗಿಕೊಂಡು ತಮ್ಮ ಸೃಜನಶೀಲ ಮನಸ್ಸನ್ನು ಮಕ್ಕಳ ಸಾಹಿತ್ಯ ರಚನೆಗೆ ದುಡಿಸಿಕೊಂಡಿದ್ದಾರೆ. ಹಾಗೂ ದುಡಿಸಿಕೊಳ್ಳುತ್ತಿದ್ದಾರೆ. ಈ ಕಾರ್ಯ ಪ್ರಾರಂಭವಾದದ್ದು ನವೋದಯ ಕಾಲದಲ್ಲಿಯೇ ವಿವಿಧ ಬಗೆಯ ಸಾಹಿತ್ಯವನ್ನು ಸೃಷ್ಟಿಸಿದ ಸಿಂಪಿ ಲಿಂಗಣ್ಣನವರು ಈ ನಿಟ್ಟಿನಲ್ಲಿಯೂ ಕೆಲಸ ಮಾಡಿದ್ದಾರೆ. ಅವರ ಬೆನ್ನ ಹಿಂದೆಯೇ ಬಂದವರು ಸಿಸು ಸಂಗಮೇಶ, ಶಂ.ಗು.ಬಿರಾದಾರ, ಸಂಗಮೇಶ ಹೊಸಮನಿ, ಕಂಚ್ಯಾಣಿ ಶರಣಪ್ಪ, ಪರಶುರಾಮ ಚಿತ್ರಗಾರ ಮೊದಲಾದವರು. ಹೊಸ ಪೀಳಿಗೆಯಲ್ಲಿ ಚಂದ್ರಗೌಡ ಕುಲಕರ್ಣಿ, ಜಂಬುನಾಥ ಕಂಚ್ಯಾಣಿ, ಫ.ಗು. ಸಿದ್ದಾಪೂರ, ಹ.ಮ. ಪೂಜಾರ, ಜಯವಂತ ಕಾಡದೇವರ ಹೀಗೆ ಹೇಳುತ್ತ ಹೋದರೆ ಅದು ದೊಡ್ಡ ಸಾಲೇ ಆಗುತ್ತದೆ. ಇವರ ಜೊತೆಗೆ ಸೇರಬೇಕಾದ ಇನ್ನೊಂದು ಹೆಸರು ಸಂಗಮೇಶ ಗುಜಗೊಂಡರು. ಇವರು ಪದವಿ ಕಾಲೇಜಿನಲ್ಲಿ ಕೆಲಸ ಮಾಡುವುದರೊಂದಿಗೆ ಅವರು ಮಕ್ಕಳ ಸಾಹಿತ್ಯವನ್ನು ಓದಿ ಮಕ್ಕಳ ಸಾಹಿತ್ಯ ರಚನೆಯನ್ನು ಶ್ರದ್ಧೆಯಿಂದ ಮಾಡುತ್ತಲಿದ್ದಾರೆ. ಅವರ ಮಕ್ಕಳ ಕವಿತೆಗಳು, ಕಥೆಗಳು, ನಾಡಿನ ಪ್ರಮುಖ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಸಂಗಮೇಶ ಗುಜಗೊಂಡರ ಜೀವನದಲ್ಲಿ ಇನ್ನೊಂದು ಮುಖ್ಯ ತಿರುವು ಅವರನ್ನು ಕಲಿಸಿದ ಗುರುಗಳು ಶಿಕ್ಷಣ ತಜ್ಞರಾದ ಸೂಳೆಭಾವಿಯವರು. ವಿದ್ಯೆ ಕಲಿಸಿದ ಗುರು ಮಾರ್ಗದರ್ಶಕರಾಗಿ ಪ್ರಭಾವ ಬೀರಿದವರು. ಇವರು ಶಾಲಾ ಮಕ್ಕಳನ್ನು ತಮ್ಮ ಮಕ್ಕಳು ಎಂದು ತಿಳಿದುಕೊಂಡು ಕಳಕಳಿಯಿಂದ ಶಿಕ್ಷಣ ಕಲಿಸಿ ತಿದ್ದಿ, ತೀಡಿ ಬೆಳೆಸಿದವರು. ಮಕ್ಕಳಿಗೆ ವ್ಯಕ್ತಿತ್ವ ಬೆಳೆಸಿಕೊಳ್ಳಲು ಉತ್ತಮ ನೀತಿಬೋಧನೆ ಮಾಡುತ್ತಿದ್ದರು. ಶಿಕ್ಷಣವೃತ್ತಿ ಎಲ್ಲ ವೃತ್ತಿಗಳಿಗಿಂತ ಶ್ರೇಷ್ಠವಾದುದು ಎಂದು ಹೇಳುತ್ತಿದ್ದರು. ಆದರ್ಶ ಶಿಕ್ಷಕನ ಜೀವನಾಡಿ ಮಕ್ಕಳ ಮೇಲಿರುವ ಕಳಕಳಿ ಎಂದು ಹೇಳುತ್ತಿದ್ದರು.

'ಮಕ್ಕಳ ಸಾಹಿತ್ಯವು ಸರಳತೆ, ಪ್ರಾಸಬದ್ಧತೆ, ಪ್ರಾದೇಶಿಕತೆಯೊಂದಿಗೆ ಅವರಿಗೆ ನಿಲುಕುವ ವಸ್ತುಗಳನ್ನು ಆಧರಿಸುವುದು ಅನಿವಾರ್ಯ. ಅಂತೆಯೇ ಜ್ಞಾನವನ್ನು ಹೆಚ್ಚಿಸುವ ಭಾಷಾ ಕೌಶಲ ಬೆಳೆಸುವ, ರಂಜನೆ ನೀಡುವ ಗುಣವಿಶೇಷಗಳು ಅವಶ್ಯ. ಈ ನಿಟ್ಟಿನಲ್ಲಿ

ಇನ್ನೂ ಹೊಸತನ ಅಪೇಕ್ಷಣೀಯವಾಗಿದ್ದು, ಹೊಸ ಹೊಸ ಕೃತಿಗಳಲ್ಲಿ ಇವುಗಳನ್ನು ಗುರುತಿಸಬೇಕಾಗಿದೆ.

ಸಂಗಮೇಶ ಗುಜಗೊಂಡರ ಕಾವ್ಯದಲ್ಲಿ ಪ್ರಕೃತಿಯ ಪ್ರೀತಿ ದೇಶಾಭಿಮಾನ, ನೀತಿಯ ಮಾತುಗಳು, ಅನುಭವಗಳು, ಸಾಮಾಜಿಕ ಬಾಂಧವ್ಯ, ಈ ನೆಲೆಯಲ್ಲಿ ಅಧ್ಯಯನ ಕೈಕೊಳ್ಳಲು ಇವು ಪೂರಕವೆನಿಸುತ್ತವೆ. ಮಕ್ಕಳ ಸಾಹಿತ್ಯದ ಅಧ್ಯಯನ ಸಮಕಾಲೀನ ಮಕ್ಕಳ ಸಾಹಿತಿಗಳೊಂದಿಗೆ ತೊಡಗಿಕೊಂಡಾಗ ಮಾತ್ರ ಅಧ್ಯಯನ ಸಾಧ್ಯವಾಗುತ್ತದೆ. ಮಕ್ಕಳ ಸಾಹಿತ್ಯದ ಮೌಲ್ಯ ಗುರುತಿಸುವ ನಿಟ್ಟಿನಲ್ಲೂ ಪ್ರಸ್ತುತ ಕೈಕೊಂಡ ಅಧ್ಯಯನ ಇನ್ನೂ ಮಹತ್ವ ಪಡೆಯುವುದರಲ್ಲಿ ಸಂದೇಹವಿಲ್ಲ.

ಇವರ ಬಾಲ್ಯ ಜೀವನದ ಅನುಭವದಿಂದಲೇ ಮಕ್ಕಳ ಸಾಹಿತ್ಯದ ಬಗ್ಗೆ ಆಸಕ್ತಿ ಬೆಳೆಸಿಕೊಂಡರು. ಇವರ ಬರಹಗಳು ಎಂದರೆ ಮಕ್ಕಳ ಕವಿತೆಗಳು ಹಾಗೂ ಕಥೆಗಳು ಮಹಾರಾಷ್ಟ್ರದಲ್ಲಿ ೩ನೇ ತರಗತಿಯ ಬಾಲಭಾರತಿ ಪುಸ್ತಕದಲ್ಲಿ ಹುಟ್ಟುಹಬ್ಬ ಕವಿತೆ, ೨೦೦೮ ರಲ್ಲಿ ಪ್ರಕಟಗೊಂಡಿದೆ. ಈಗ ೫ನೇ ತರಗತಿಯ ಪ್ರಥಮ ಭಾಷೆಯ ಸಿರಿಗನ್ನಡ ಮೊದಲ ಸೆಮಿಸ್ಟರ್ ಪುಸ್ತಕದಲ್ಲಿ 'ಇನಾಮು ಪತ್ರ' ಕಥೆ ಪ್ರಕಟಗೊಂಡಿದೆ. ೬ನೇ ತರಗತಿಯ ಕನ್ನಡ ತೃತಿಯ ಭಾಷೆ ಪಠ್ಯ ಪುಸ್ತಕದಲ್ಲಿ 'ಪ್ರೀತಿಯೇ ದೇವರು' ಕವಿತೆ ಪ್ರಕಟವಾಗಿದೆ. ೨೦೧೪ ರಿಂದ ಮಹಾರಾಷ್ಟ್ರದ ೩ನೇ ತರಗತಿ ಕನ್ನಡ ಪಠ್ಯ ಪುಸ್ತಕಕ್ಕೆ 'ಹೋದ ಮಳೆ ಬಂತು' ಆಯ್ಕೆಗೊಂಡಿದೆ.

ಸಂಗಮೇಶ ಗುಜಗೊಂಡರು ಯಾವುದೇ ಪ್ರಶಸ್ತಿ ಪುರಸ್ಕಾರಗಳಿಗೆ ಬೆನ್ನು ಬಿದ್ದವರಲ್ಲ. ಅವುಗಳೇ ಅವರ ಮಕ್ಕಳ ಸಾಹಿತ್ಯದ ಮೌಲ್ಯಗಳನ್ನು ಗುರುತಿಸಿ ಮನೆಯ ಬಾಗಿಲಿಗೆ ಬಂದಿವೆ. 'ನೂರು ನಾಣ್ಯ ಮೂರು ಮಾತು' ಕೃತಿಗೆ ಕನ್ನಡ ಪುಸ್ತಕ ಪ್ರಾಧಿಕಾರ ಬಹುಮಾನ, ಬನಹಟ್ಟಿಯ 'ತಮ್ಮಣಪ್ಪ ಚಿಕ್ಕೋಡಿ ಮಕ್ಕಳ ಸಾಹಿತ್ಯ ಪುರಸ್ಕಾರ' ದೊರೆತಿವೆ. ಇದಲ್ಲದೆ ವಿಜಾಪೂರ ಜಿಲ್ಲಾ ಮಕ್ಕಳ ಸಾಹಿತ್ಯ ಪುರಸ್ಕಾರ ದೊರೆತಿವೆ. ವಿಜಾಪುರ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ ಸಂಸ್ಥೆಯಿಂದ ಸನ್ಮಾನ, ಕನ್ನಡ ಸಾಹಿತ್ಯ ಪರಿಷತ್ತಿನ ದತ್ತಿನಿಧಿ ಬಹುಮಾನ, ಡಾ. ಎಸ್. ರಾಧಾಕೃಷ್ಣನ್ ಪ್ರಶಸ್ತಿ, ನಾಲವತ್ತವಾಡದ ವಿಜಯ ಪ್ರಕಾಶನದಿಂದ 'ಮಕ್ಕಳರತ್ನ' ಪ್ರಶಸ್ತಿ ಬೆಳಗಾವಿಯ ಪಿ. ವಿಜಯಕುಮಾರ ದತ್ತಿನಿಧಿ ಪ್ರಶಸ್ತಿ, ಬನಹಟ್ಟಿಯ ಮಹದೇವಪ್ಪ ಕರ್ಲಟ್ಟಿ ಮಕ್ಕಳ ಸಾಹಿತ್ಯ ಪುರಸ್ಕಾರ, ನಿಜಕ್ಕೂ ಎಲೆಮರೆಯ ಕಾಯಿಯಂತೆ ಮೂಡಲಗಿಯಲ್ಲಿ ತಮ್ಮ ವೃತ್ತಿ ಬದುಕಿನೊಂದಿಗೆ ಮಕ್ಕಳ ಸಾಹಿತ್ಯದಲ್ಲಿ ತೊಡಗಿರುವ ಇವರ ಸಾಧನೆ ಪ್ರಶಂಸನೀಯವಾದದ್ದು. ಸಂಗಮೇಶ ಗುಜಗೊಂಡರು ತಮ್ಮದೇ ಆಸಕ್ತಿ, ಹುಮ್ಮಸ್ಸಿನಿಂದ ಮಕ್ಕಳ ಸಾಹಿತ್ಯ ರಚಿಸುತ್ತಿರುವುದು ಶ್ಲಾಘನೀಯ. ಇವರ ಮೂರು ಕೃತಿಗಳಿಗೆ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನದ ಪಿ. ವಿಜಯಕುಮಾರ ದತ್ತಿನಿಧಿ ಮಕ್ಕಳ ಪ್ರಶಸ್ತಿ ಲಭಿಸಿವೆ. ಹತ್ತು ಹಲವು ಸಂಘ-ಸಂಸ್ಥೆಗಳು ಇವರನ್ನು ಗುರುತಿಸಿವೆ.

ಸಂಗಮೇಶ ಗುಜಗೊಂಡರ ಮಕ್ಕಳ ಕವಿತೆಯ ಸಾಲುಗಳು ಮಕ್ಕಳ ಮನಸ್ಸನ್ನು ಅರಳಿಸಿ ಕಲ್ಪನೆಯ ಲೋಕದಲ್ಲಿ ತೇಲಿಸುತ್ತವೆ. ಸದಾ ಸರಳ, ಸಜ್ಜನಿಕೆಯ ವ್ಯಕ್ತಿಯಾದ ಇವರು ಮಗುವಿನೊಂದಿಗೆ ಮಗುವಾಗಿ ಹಾಡುತ್ತ ಕುಣಿಯುತ್ತ ಕಿಲ-ಕಿಲ ನಗುತ್ತ ಕಾಲ ಕಳೆಯುತ್ತ ಮಕ್ಕಳ ಮನವುಳ್ಳವರು ಎಂಬ ಮಾತು ಸತ್ಯ, ಸಂಗಮೇಶ ಗುಜಗೊಂಡರು ನಿಜಕ್ಕೂ ಪರಿಸರಪ್ರೇಮಿ. ಅಂತೆಯೇ ಅದನ್ನು ಮಕ್ಕಳ ಮನಸ್ಸಿನಲ್ಲಿ ಗಟ್ಟಿಗೊಳಿಸಲು ಮತ್ತೆ ಮತ್ತೆ ನೆನೆಸುತ್ತಾರೆ. ಇದು ಇಂದಿನ ಅಗತ್ಯವೂ ಹೌದು. ಒಂದು ಕವಿತೆಯ ಸಾಲುಗಳನ್ನು ಇಲ್ಲಿ ನೊಡಬಹುದು.

'ತೋಟದ ಊಟವು ಎಚ್ಚರ ನೀಡಿತು
ಜಗವಿದು ಕೆಡುವುದು ಇನ್ಮುಂದೆ
ಪರಿಸರ ಉಳಿಸಲು ಹೋಗುವ ಕೆಲಸವು
ನಿಂತಿತು ಎಲ್ಲರ ಕಣ್ಮುಂದೆ'

ಬದುಕಿನ ಬಗ್ಗೆ ಕಾಳಜಿ ಮೂಡಬೇಕಾದುದು ಚಿಕ್ಕ ವಯಸ್ಸಿನಲ್ಲಿಯೇ ಒಬ್ಬ ಮನುಷ್ಯ ಸೋಮಾರಿಯಾಗುವುದಾಗಲಿ, ಮೈಮುರಿದು ದುಡಿಯುವ ಗುಣವುಳ್ಳವನಾಗುವುದಾಗಲಿ ಬಾಲ್ಯದಲ್ಲಿ ಪಡೆದ ಸಂಸ್ಕಾರದಿಂದಲೇ ಎಂಬುದು ಎಲ್ಲರಿಗೂ ತಿಳಿದಿರುವ ವಿಷಯ. ಮಕ್ಕಳಿಗೆ ದುಡಿಯುವ ಸಂಸ್ಕಾರ ನೀಡುವ ಕಾರ್ಯವನ್ನು ಸಂಗಮೇಶ ಗುಜಗೊಮಡರ ಕವಿತೆಗಳು ಮಾಡುತ್ತವೆ.

ನಿಸರ್ಗದ ವೈಚಿತ್ರ್ಯ ಕವಿಯ ಮನೋಭಾವದಲ್ಲಿ ಅಲ್ಲಿಯ ಸಂಭ್ರಮ ಪ್ರಕೃತಿಯಲ್ಲಿ ಕಾಣುವುದು ಮೇರುಕವಿಗೆ ಮಾತ್ರ. ಇದು ಗುಜಗೊಂಡರಿಗೆ ಬಂದ ವರ. ಎಲ್ಲರ ಪ್ರೀತಿಗೆ ಪಾತ್ರರಾಗಿ ಹಲವಾರು ಸಂಘ ಸಂಸ್ಥೆಗಳ ಸದಸ್ಯರಾಗಿ ಸಕ್ರೀಯವಾಗಿ ಪಾಲ್ಗೊಂಡು ಮಕ್ಕಳ ಸಾಹಿತ್ಯಕ್ಕೆ ಹೆಚ್ಚು ಒತ್ತು ಕೊಟ್ಟವರು. ಒಬ್ಬ ಪ್ರಾಧ್ಯಾಪಕರಾಗಿ, ಸಂಘಟಕರಾಗಿ, ಕವಿಯಾಗಿ, ಕಥೆಗಾರರಾಗಿ, ಸಾಹಿತ್ಯ ಸೇವೆ ಮಾಡುತ್ತಿರುವ ಗುಜಗೊಂಡರ ಬದುಕಿನ ನಾನಾ ಸ್ಥರಗಳನ್ನು ಹಿನ್ನಲೆಯಾಗಿಟ್ಟುಕೊಂಡು ಅವರ ಮಕ್ಕಳ ಸಾಹಿತ್ಯ ಅಧ್ಯಯನ ಮಾಡುವುದು ಸಮಂಜಸವೆನಿಸುತ್ತದೆ.

ಸಂಗಮೇಶ ಗುಜಗೊಂಡರ ಕವಿತೆಗಳು, ಕಥೆಗಳು, ಮೌಲಿಕ ಉಪನ್ಯಾಸ ಮಾಲಿಕೆ, ವ್ಯಕ್ತಿಪರಿಚಯ, ಸಹಜತೆ ಮತ್ತು ನೈಜತೆಯಿಂದ ಕೂಡಿದೆ. ಅವರ ಗಟ್ಟಿ ಬರವಣಿಗೆ ಅವರ ವ್ಯಕ್ತಿತ್ವವನ್ನು ಎತ್ತಿ ಹಿಡಿಯುತ್ತದೆ. ಈ ಹಿನ್ನಲೆಯಲ್ಲಿ ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯ ಒಂದು ಅಧ್ಯಯನ ಎಂಬ ತಲೆಬರಹದಡಿಯಲ್ಲಿ ಅಧ್ಯಯನ ಮಾಡಿ ಈ ಪ್ರಬಂಧ ರಚಿಸಲಾಗಿದೆ. ಅಧ್ಯಯನಕ್ಕೆ ಅವರ ಒಟ್ಟು ಆರು ಕೃತಿಗಳನ್ನು ಅಳವಡಿಸಿಕೊಳ್ಳಲಾಗಿದೆ.

ಸಂಗಮೇಶ ಗುಜಗೊಂಡರ ಮಕ್ಕಳ ಸಾಹಿತ್ಯ ವಿಶಿಷ್ಟವಾದದ್ದು ಮತ್ತು ವೈವಿಧ್ಯಮಯವಾದದ್ದು. ಅವರ ಒಟ್ಟಾರೆ ಮಕ್ಕಳ ಸಾಹಿತ್ಯಕ್ಕೆ ಸಂಬಂಧಿಸಿದ ಕವಿತೆಗಳು

ಇರಬಹುದು, ಕಥೆಗಳು ಇರಬಹುದು, ಜೀವನಚರಿತ್ರೆ ಇರಬಹುದು. ಅವರು ಮಕ್ಕಳ ಸಾಹಿತ್ಯ ರಚನೆ ಮಾಡುವಲ್ಲಿ ಸಾರ್ಥಕತೆಯನ್ನು ಕಂಡುಕೊಂಡಿದ್ದಾರೆ. ಮಕ್ಕಳ ಸಾಹಿತ್ಯಕ್ಕೆ ವಿಶಿಷ್ಟ ಕೊಡುಗೆಯನ್ನು ನೀಡಿದ್ದಾರೆ. ಅವರ ಒಟ್ಟು ಆರು ಕೃತಿಗಳು ಸಂಶೋಧನೆಯಲ್ಲಿ ಇತಿಮಿತಿಯಾಗಿ ಬಳಸಿಕೊಳ್ಳಲಾಗಿದೆ.

**ಕಥೆಯ ವೈಶಿಷ್ಟ್ಯತೆ :**

ಮಕ್ಕಳ ಕಥೆಗಳೆಂದರೆ ಮಕ್ಕಳಿಗಾಗಿ ಓದಿ ಖುಷಿ ಪಡುವಂತಹ ಕಥೆಗಳು. ಕಥೆಗಳು ಓದಲು ಸುಲಭವಾಗಿ ಚಿಕ್ಕ ಚಿಕ್ಕ ಶಬ್ದಗಳುಳ್ಳ, ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಬರೆದಿರಬೇಕು. ಕಥೆಯೊಳಗೆ ಒಂದು ನೀತಿಯನ್ನು ಒಳಗೊಂಡಿರಬೇಕು ಮತ್ತು ಕಥೆಗೆ ಸಂಬಂಧಪಟ್ಟ ಚಿತ್ರವಿದ್ದರೆ ಒಳಿತು. ಸಂಗಮೇಶ ಗುಜಗೊಂಡರ ಕಥೆಗಳೂ ಕೂಡಾ ಹಲವು ನೀತಿ ತತ್ವಗಳಿಂದ ಕೂಡಿದ್ದವುಗಳಾಗಿವೆ ಮತ್ತು ಕಥೆಗಳು ಹಲವು ಉದ್ದೇಶಗಳಿಂದ ಬರೆಯಬೇಕಾಗುತ್ತದೆ. ಮಕ್ಕಳ ಕಥೆಗಳನ್ನು ಬರೆಯಬೇಕೆಂದರೆ ಮೊದಲು ಮಕ್ಕಳ ಕಥೆಗಳನ್ನು ಓದಲು ಹವ್ಯಾಸ ರೂಢಿಸಿಕೊಳ್ಳಬೇಕು. ಹಲವಾರು ಪತ್ರಿಕೆಗಳಲ್ಲಿ ಪ್ರಕಟವಾಗುವ ಕಥೆಗಳು ಓದಬೇಕು. ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಚಂದಮಾಮ, ತುಷಾರ, ಸುಧಾ, ಕನ್ನಡಪ್ರಭ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗುವ ಪಂಚತಂತ್ರ ಕಥೆಗಳು, ಬೀರಬಲ್ಲನ ಕಥೆಗಳು, ಸಾಮಾಜಿಕ ಕಥೆಗಳು, ಜಾನಪದ ಕಥೆಗಳು, ನೀತಿ ಕಥೆಗಳು, ಹೀಗೆ ಮುಂತಾದ ಕಥೆಗಳನ್ನು ಓದುವ ರೂಢಿ ಮಾಡಿಕೊಳ್ಳಬೇಕು. ಮಕ್ಕಳಿಗೆ ಮನಸ್ಸಿಗೆ ಮನರಂಜನೆ ನೀಡುವ ಮೋಜಿನ ಕಥೆಗಳು ಬಹಳ ಇಷ್ಟವಾಗುತ್ತವೆ. ಮನಸ್ಸಿನ ಬೇಸರ ಕಳೆಯಲು ಉತ್ತಮ ಕಥೆಗಳು ನೆರವಾಗುತ್ತವೆ. ಕಥೆಗಳಲ್ಲಿ ಮೂಡಿಬಂದ ಕಥೆಗಾರರ ಜೀವನದ ಆದರ್ಶಗಳನ್ನು ಮಕ್ಕಳು ಕಲಿಯಬೇಕಾಗುತ್ತದೆ.

ಕಥೆ ಬರೆಯುವವರು ಹತ್ತು ಹಲವು ಕಥೆಗಳನ್ನು ಓದಿ ತಮ್ಮದೇ ಆದ ಒಂದು ಹೊಸ ಕಥೆಯನ್ನು ರಚಿಸಿ ಹೊಸ ರೂಪಕೊಟ್ಟು ಬರೆದರೆ ತಪ್ಪಲ್ಲ. ಮಕ್ಕಳ ಕಥೆಗಳನ್ನು ಬರೆಯುವವರು ಅನೇಕ ಖ್ಯಾತ ಮಕ್ಕಳ ಸಾಹಿತಿಗಳ ಕಥೆಗಳನ್ನು ಓದುವ ಆಸಕ್ತಿಯನ್ನು ಬೆಳೆಸಿಕೊಳ್ಳಬೇಕು. ಅಂದಾಗ ಮಾತ್ರ ಮಕ್ಕಳ ಕಥೆ ಬರೆಯುವ ರಚನಾ ತಂತ್ರವನ್ನು ಬೆಳೆಸಿಕೊಳ್ಳಲು ಸುಲಭ. ಮಕ್ಕಳ ಕಥೆ ಬರೆಯುವವರು ಹತ್ತಾರು ಮಕ್ಕಳ ಸಾಹಿತಿಗಳ ಪ್ರೇರಣೆ ಪಡೆದು ಮಕ್ಕಳ ಕಥೆಗಳನ್ನು ರಚಿಸಿ ಸಾದರ ಪಡಿಸಲು ಸಾಧ್ಯ.

ಮಕ್ಕಳಿಗೆ ಐತಿಹಾಸಿಕ ಕಥೆಗಳು, ಪರಂಪರೆ, ವಿಶ್ವಬಂಧುತ್ವ, ನಾಡು, ನುಡಿಗಳ, ದೇಶಭಕ್ತಿ ಅಭಿಮಾನ ಬೆಳೆಸುವ ಉತ್ತಮ ಕಥೆಗಳು ಮಕ್ಕಳಿಗೆ ಜ್ಞಾನವರ್ಧಕ ವಿಷಯಗಳನ್ನು ಬೆಳೆಸಿಕೊಳ್ಳಲು ಐತಿಹಾಸಿಕ ಘಟನೆಗಳನ್ನು ನೆನಪಿಸಿಕೊಳ್ಳಲು ಮಕ್ಕಳ ಮೇಲೆ ಪ್ರಭಾವ ಬೀರುತ್ತವೆ. ಮಕ್ಕಳಲ್ಲಿಯ ಸುಪ್ತ ಶಕ್ತಿಯನ್ನು ಹೊರಹೊಮ್ಮಿಸಲು ಚೇತನ ತುಂಬಲು ನೀತಿ ನಿರೂಪಿಸಲು ಪ್ರಾಣಿಪಕ್ಷಿಗಳ ಕಥೆಗಳು ಮಕ್ಕಳ ಮೇಲೆ ತುಂಬಾ ಪರಿಣಾಮ ಬೀರುತ್ತವೆ.

ಅಲ್ಲದೆ ಮಕ್ಕಳು ಸಾಹಸ ಕಥೆಗಳನ್ನು ಓದುವುದರಿಂದ ಧೈರ್ಯ, ಸಾಹಸ, ಪ್ರವೃತ್ತಿಗಳನ್ನು ಬೆಳೆಸಿಕೊಳ್ಳಲು ಸಾಧ್ಯವಾಗುತ್ತದೆ. ಕಾಮಿಕ್ಸ್ ಕಥೆಗಳು ಮಕ್ಕಳಿಗೆ ಹಾಸ್ಯಪ್ರಜ್ಞೆಯನ್ನು ಮೂಡಿಸುತ್ತವೆ. ಹಾಸ್ಯದಿಂದ ಮನಸ್ಸು ಸಂತೋಷದಿಂದ ಕುಣಿಯುತ್ತದೆ. ಇದರ ಜೊತೆಗೆ ಸಾಮಾಜಿಕ ಕಥೆಗಳು, ದೇಶಭಕ್ತಿ ಕಥೆಗಳು, ಪರಿಸರ ಕುರಿತು ಬರೆದ ಕಥೆಗಳು ಮಕ್ಕಳಲ್ಲಿ ಪ್ರಜ್ಞೆ ಮೂಡಿಸಲು ಪ್ರಭಾವ ಬೀರುತ್ತವೆ.

ಸಂಗಮೇಶ ಗುಜಗೊಂಡರು ಎರಡು ಮಕ್ಕಳ ಕಥಾಸಂಕಲನಗಳು ಪ್ರಕಟಿಸಿದ್ದಾರೆ. ಒಂದು 'ನೂರು ನಾಣ್ಯ ಮೂರು ಮಾತು' ಮತ್ತು 'ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು' ಎರಡು ಕಥಾಸಂಕಲನಗಳು ಪ್ರಕೃತಿ ಪ್ರೀತಿ, ದೇಶಾಭಿಮಾನ, ಭಾವೈಕ್ಯತೆ ಬೆಳೆಸಿಕೊಳ್ಳಲು ಉತ್ತಮ ಗುಣ ಹೊಂದಲು ಮಕ್ಕಳ ಮೇಲೆ ಕಥೆಗಳು ತಮ್ಮ ಪ್ರಭಾವ ಬೀರುವಲ್ಲಿ ಯಶಸ್ವಿಯಾಗುತ್ತವೆ. ಕಥೆಗಳ ಪ್ರಭಾವದಿಂದ ಮಕ್ಕಳು ಸರ್ವಾಂಗೀಣ ಪ್ರಗತಿ ಹೊಂದಲು ಇಚ್ಚಿಸುತ್ತಾರೆ. ನೈತಿಕ ಮೌಲ್ಯಗಳನ್ನು ಅಳವಡಿಸಿಕೊಂಡು ಜೀವನದಲ್ಲಿ ಸಂತೋಷ ಸವಿಯುತ್ತಾರೆ.

**ಜೀವನ ಚರಿತ್ರೆ :**

ಕಾಲ ಸುಮಾರು ೧೫೦೦ ವೀರಶೈವ ಕವಿ. ಶಂಭುಲಿಂಗಸ್ವಾಮಿ ಎಂಬ ಸನ್ಯಾಸಿ ಈತನ ಗುರು 'ಅರವತ್ತು ಮೂವರ ತ್ರಿಪದಿ' ಎಂಬುದು ಇನ್ನೊಂದು ಈತನ ಕೃತಿ. ಇವನ ಎಲ್ಲಾ ಕೃತಿಗಳಲ್ಲಿ ಶಂಭುಲಿಂಗನ ಅಂಕಿತ ದೊರೆಯುತ್ತವೆ. ಅನುಭವಸಾರ, ಗುರುಶಿಷ್ಯ ಸಂವಾದ, ರೂಪದಲ್ಲಿದ್ದು ತ್ರಿಪದಿಯಲ್ಲಿ ರಚಿತವಾಗಿದೆ. ಕೈವಲ್ಯ ಪದ್ಧತಿ, ಅನುಭಾವ ಗೀತೆಗಳ ಸಂಕಲನ, ಈ ಕೃತಿಯಲ್ಲಿ ಭಾವನೆಗಳಿಗೆ ಅನುಗುಣವಾದ ಬಗೆ ಬಗೆಯ ರಾಗಗಳು ಮೂಡಿಬಂದಿರುವುದರಿಂದ ಇದು ಕನಾಟಕ ಸಂಗೀತ ಶಾಸ್ತ್ರಜ್ಞರಿಗೆ ಮಹತ್ವಪೂರ್ಣ ಕೃತಿಯಾಗಿದೆ. ಪರಮಾರ್ಥಗೀತೆಯು ಲಲಿತ ರಗಳೆಯಲ್ಲಿದ್ದು ಕೆಲವು ಕಂದಗಳಿವೆ. ಗ್ರಂಥ ಗುರು–ಶಿಷ್ಯರ ಸಂವಾದದಂತಿದೆ. ಪರಮಾನುಭವ ಭೋದೆಯು ಯಾಜ್ಞವಲ್ಕ್ಯ ಮೈತ್ರೇಯಿಯರ ಸಂವಾದ ರೂಪದಲ್ಲಿದ್ದು ಸಾಂಗತ್ಯದಲ್ಲಿದೆ. ಪರಮಾರ್ಥ ಪ್ರಕಾಶಿಕೆ ಚನ್ನಸದಾಶಿವಯೋಗಿ ಕೃತಿ ಶಿವಯೋಗ ಪ್ರದೀಪಿಕೆಗೆ ಕನ್ನಡ ವ್ಯಾಖ್ಯಾನವನ್ನು ಇದರಲ್ಲಿ ನೀಡಿದೆ. ವಿವೇಕ ಚಿಂತಾಮಣಿ ಒಂದು ಗದ್ಯಗ್ರಂಥ. ಕನ್ನಡದ ಮೊದಲ ವಿಶ್ವಕೋಶ ಎಂಬ ದೃಷ್ಟಿಯಿಂದ ಮಹತ್ವವಾದ ಸ್ಥಾನ ದೊರೆತಿದೆ. ಅರವತ್ತು ಮೂವರ ತ್ರಿಪದಿಯು ೬೩ ಜನ ಶಿವಭಕ್ತರ ಸ್ತುತಿ ರೂಪದಲ್ಲಿದೆ. ಈತನು ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಬರೆದಿದ್ದಾನೆಂದು ಹೇಳುತ್ತಾರೆ. ಅವು ಉಪಲಬ್ಧವಿಲ್ಲ. ಈತನನ್ನು ನಾವು ಮೆಚ್ಚುವುದು ಈತನ ಆಧ್ಯಾತ್ಮ ಜ್ಞಾನಕ್ಕಾಗಿ ಮತ್ತು ಅದನ್ನು ಕನ್ನಡಕ್ಕೆ ತಂದು ಕೊಡುವಲ್ಲಿ ಈತನ ಕಳಕಳಿಗಾಗಿ, ವಿವೇಕ ಚಿಂತಾಮಣಿ ಸಂಸ್ಕೃತ ಹಾಗೂ ಮರಾಠಿ ಭಾಷೆಗಳಿಗೂ ಭಾಷಾಂತರವಾಗಿದೆ.

ಮಕ್ಕಳಿಗೆ ಕಥೆ ಹೇಳುವ ಸಂಪ್ರದಾಯ ಬಹು ಹಿಂದಿನಿಂದ ಒಂದು ಪರಂಪರೆಯಾಗಿಯೇ ನಮ್ಮಲ್ಲಿ ಬೆಳೆದುಬಂದಿದೆ. ನಮ್ಮ ಜಾನಪದವು ಅತ್ಯಂತ ಸೃಜನಶೀಲವಾಗುವುದು ಈ ಕಥೆ ಕಟ್ಟುವ ಚಂದದಲ್ಲಿ. ಹಳ್ಳಿ-ಹಳ್ಳಿಯಲ್ಲೂ ಮಕ್ಕಳಿಗಾಗಿ ರೋಚಕ ಕಥೆ ಕಟ್ಟುವ ಕಥೆಗಾರರನ್ನು ನಾವು ನೋಡಿದ್ದೇವೆ. ಈ ಜಾನಪದ ಸಂಪ್ರದಾಯ ಆಧುನಿಕ ಸಂದರ್ಭದಲ್ಲಿ ಮುಂದುವರೆಯುತ್ತಿರುವುದು ಸಂಗಮೇಶ ಗುಜಗೊಂಡರು ಮಕ್ಕಳಿಗಾಗಿ ಹೇಳುತ್ತಿರುವ ಕಥೆಗಳನ್ನು ನೋಡಿದಾಗ ಸ್ಪಷ್ಟವಾಗುತ್ತದೆ. ಮೌಖಿಕ ಸಂಪ್ರದಾಯದ ಎಲ್ಲ ಗತ್ತು, ಬನಿ, ತನ್ಮಯತೆ ಈ ಕಥೆಗಳ ರಚನೆಯಲ್ಲಿ ಕಾಣುತ್ತದೆ ಎಂದು ಡಾ. ಎಚ್.ಎಸ್. ವೆಂಕಟೇಶಮೂರ್ತಿ ಇವರ ಕಥೆಗಳ ಬಗ್ಗೆ ಅಭಿಪ್ರಾಯ ಪಟ್ಟಿದ್ದಾರೆ.

* * *

# ಪರಾಮರ್ಶನ ಗ್ರಂಥಗಳು



| ಕ್ರ.ಸಂ. | ಕೃತಿ | ಲೇಖಕರು | ಪ್ರಕಾಶನ |
|---|---|---|---|
| ೧. | ಶತಮಾನದ ಕಾವ್ಯ | ಸಂ. ಎಚ್.ಎಸ್. ವೆಂಕಟೇಶಮೂರ್ತಿ | ಕ.ಸಾ. ಅಕಾಡಮಿ, ಬೆಂಗಳೂರು, ೨೦೦೧ |
| ೨. | ಕನ್ನಡ ಸಾಹಿತ್ಯ | ಸಂ. ರಹಮತ್ ತರೀಕೆರೆ | ಕ.ವಿ.ವಿ. ಮೀಮಾಂಸೆ, ಹಂಪಿ, ೨೦೦೧ |
| ೩. | ಸಂಸ್ಕೃತಿ–ಶ್ರಮ ಮತ್ತು ಸೃಜನಶೀಲತೆ | ಲೇ: ಬರಗೂರು ರಾಮಚಂದ್ರಪ್ಪ | ಅಂಕಿತ ಪ್ರಕಾಶನ, ಬೆಂಗಳೂರು, ೨೦೦೧ |
| ೪. | ಕಣವಿಯವರ ಕವಿತೆ | ಸಂ. ಗುರಲಿಂಗ ಕಾಪಸೆ | ಸಮುಖ ಪ್ರಕಾಶನ, ಬಎಂಗಳೂರು, ೨೦೦೮ |
| ೫. | ಸಖಿಗೀತೆ | ಸಂ. ವಾಮನ ಬೇಂದ್ರೆ | ಶ್ರೀಮಾತಾ ಪ್ರಕಾಶನ, ಧಾರವಾಡ, ೧೯೯೦ |
| ೬. | ಮಕ್ಕಳ ಸಾಹಿತ್ಯ ಚಿಂತನೆ ಮತ್ತು ಸಿಸು ಸಂಗಮೇಶ | ಸಂ. ಡಾ. ಗುರಲಿಂಗ ಕಾಪಸೆ | ಕ.ಸಾ. ಅಕಾಡಮಿ, ಬೆಂಗಳೂರು |
| ೭. | ಅಜ್ಜನ ಹಾಡು | ಲೇ: ಕಂಬ್ಯಾಣಿ ಶರಣಪ್ಪ | ಗ್ರಾಮೀಣ ಪ್ರಕಾಶನ, ವಿಜಾಪುರ |
| ೮. | ಹೊಸಗನ್ನಡ ಕಾವ್ಯದ ಎರಡು ಮಾರ್ಗಗಳು | ಸಂ. ಜಿ.ಎಸ್. ಶಿವರುದ್ರಪ್ಪ | ಬೆಂಗಳೂರು ವಿ.ವಿ. ಬೆಂಗಳೂರು, ೧೯೮೧ |
| ೯. | ಹಾಡೋಣ ಬಾರ ಪ್ರೇಮದ ಹಾಡಾ | ಲೇ: ಶ್ರೀರಾಮ ಇಟ್ಟಣ್ಣವರ | ದೃವರಂಗ ಪ್ರಕಾಶನ, ಹುನಗುಂದ, ೧೯೯೧ |
| ೧೦. | ಹೂವಿನ ಹಂದರ | ಸಂ. ಕಂಬ್ಯಾಣಿ ಶರಣಪ್ಪ | ಶಂ.ಗು. ಬಿರಾದಾರ ಸನ್ಮಾನ ಸಮಿತಿ, ಬಿಜಾಪುರ, ೧೯೬೮ |
| ೧೧. | ಶತಮಾನದ ಮಕ್ಕಳ ಸಾಹಿತ್ಯ | ಲೇ: ಎನ್.ಎಸ್. ರಘುನಾಥ | ಕ.ಸಾ. ಅಕಾಡಮಿ, ಬೆಂಗಳೂರು, ೨೦೦೧ |
| ೧೨. | ಕರ್ನಾಟಕ ಗಾಂಧಿ | ಲೇ: ಡಾ. ಮಲ್ಲಿಕಾರ್ಜುನ ಮೇತ್ರಿ | ಸಂಗಮ ಪ್ರಕಾಶನ, ಬಿಜಾಪೂರ, ೨೦೦೨ |
| ೧೩. | ಸಿ.ಸು. ಸಂಗಮೇಶ ಆಯ್ದ ಮಕ್ಕಳ ಸಾಹಿತ್ಯ | ಸಂ. ಪ್ರೊ. ಸಿದ್ದಣ್ಣ ಉತ್ನಾಳ | ಕ.ಪು. ಪ್ರಾಧಿಕಾರ, ಬೆಂಗಳೂರು, ೨೦೦೩ |

| | | | |
|---|---|---|---|
| ೧೪. | ಬೆಳ್ಳಿ ಬೆಳಕು | ಸಂ. ಶಂ.ಗು. ಬಿರಾದಾರ | ಜಿಲ್ಲಾ ಸಾಹಿತ್ಯ ಸಂಸ್ಕೃತಿ ಸಂಘ, ವಿಜಾಪುರ, ೧೯೯೨ |
| ೧೫. | ಕನ್ನಡ ಸಾಹಿತ್ಯ ಚರಿತ್ರೆ | ರಂ.ಶ್ರೀ. ಮುಗಳಿ | ಉಷಾ ಸಾಹಿತ್ಯ ಮಾಲೆ, ಮೈಸೂರು ವಿವಿ. ೧೯೭೧ |
| ೧೬. | ಕಂಚ್ಯಾಣಿಯವರ ಶಿಶುಕಾವ್ಯ | ಲೇ: ಪ್ರೊ. ಗುರುರಾಜ ಮೇಡಿದಾರ | ಸಂಕ್ರಾಂತಿ ಪ್ರಕಾಶನ, ವಿಜಾಪೂರ, ೨೦೧೧ |
| ೧೭. | ಹೊಸಗನ್ನಡ ಸಾಹಿತ್ಯ | ಲೇ: ಎಲ್.ಎಸ್. ಶೇಷಗಿರಿರಾವ್ | ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೯೩ |
| ೧೮. | ಬಸವಣ್ಣನವರ ವಚನ ಸಂಪುಟ–೧ | ಲೇ: ಡಾ. ಎಂ.ಎಂ. ಕಲಬುರ್ಗಿ | ಕನ್ನಡ ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು, ೧೯೯೩ |
| ೧೯. | ಬಂಡಾಯ ಸಾಹಿತ್ಯ | ಲೇ: ಬಸವರಾಜ ಸಬರದ | ಕ.ವಿ.ವಿ. ಹಂಪಿ, ೨೦೦೧ |
| ೨೦. | ಮಿರ್ಜಿ ಅಣ್ಣಾರಾಯರು : ಒಂದು ಅಧ್ಯಯನ | ಶಿವಾನಂದ ಗಾಳಿ | ಸುಂದರ ಪ್ರಕಾಶನ, ಧಾರವಾಡ, ೧೯೯೫ |
| ೨೧. | ಪುಟ್ಟಿಯ ತೋಟ | ಕಂಚ್ಯಾಣಿ ಶರಣಪ್ಪ | ಗ್ರಾಮೀಣ ಪ್ರಕಾಶನ, ವಿಜಾಪೂರ, ೨೦೦೨ |
| ೨೨. | ತೋಟದ ಆಟ | ಕಂಚ್ಯಾಣಿ ಶರಣಪ್ಪ | ನವಕರ್ನಾಟಕ ಪಬ್ಲಿಕೇಷನ್, ಬೆಂಗಳುರು, ೧೯೯೩ |
| ೨೩. | ಒಲವೇ ನಮ್ಮ ಬದುಕು | ವಾಮನ ಬೇಂದ್ರೆ | ಗೀತಾ ಬುಕ್ ಹೌಸ್, ಮೈಸೂರು, ೧೯೮೬ |
| ೨೪. | ಗ್ರಾಮೀಣ ಸಾಂಸ್ಕೃತಿಕ ಪರಂಪರೆ ಮತ್ತು ರಾಷ್ಟ್ರೀಯ ಭಾವೈಕ್ಯ | ಸಂಗಮೇಶ ಗುಜಗೊಂಡ | ಕ.ವಿ.ವಿ. ಧಾರವಾಡ, ೧೯೯೪ |
| ೨೫. | ನೂರು ನಾಣ್ಯ ಮೂರು ಮಾತು | ಸಂಗಮೇಶ ಗುಜಗೊಂಡ | ಭೂಮಂಡಲ ಪ್ರಕಾಶನ, ಮೂಡಲಗಿ, ೧೯೯೫ |
| ೨೬. | ಅಮ್ಮಾ ಕೇಳೆ | ಸಂಗಮೇಶ ಗುಜಗೊಂಡ | ಭೂಮಂಡಲ ಪ್ರಕಾಶನ, ಮೂಡಲಗಿ, ೧೯೯೫ |
| ೨೭. | ಮತ್ತೆ ಬಂತು ಚೈತ್ರ | ಸಂಗಮೇಶ ಗುಜಗೊಂಡ | ಭೂಮಂಡಲ ಪ್ರಕಾಶನ, ಮೂಡಲಗಿ, ೧೯೯೫ |

| | | | |
|---|---|---|---|
| ೨೮. | ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು | ಸಂಗಮೇಶ ಗುಜಗೊಂಡ | ಸಿ.ವಿ.ಜಿ. ಇಂಡಿಯಾ ಬೆಂಗಳೂರು, ೨೦೧೨ |
| ೨೯. | ಕೈವಲ್ಯ ಚಕ್ರವರ್ತಿ ನಿಜಗುಣ ಶಿವಯೋಗಿ | ಸಂಗಮೇಶ ಗುಜಗೊಂಡ | ಪೂಜ್ಯ ಶ್ರೀ ಚನ್ನವೀರ ಸ್ವಾಮೀಜಿ ಪ್ರತಿಷ್ಠಾನ, ಸಿಂದಗಿ, ೨೦೧೪ |
| ೩೦. | ಚಿನ್ನದ ಚೆಂಡು | ಡಾ. ಪಿ. ನಾರಾಯಣ ಭಟ್ | ಕಮಲ ಎಂಟರಪ್ರೈಜಿಸ್, ಬೆಂಗಳೂರು, ೨೦೧೦ |
| ೩೧. | ಕನ್ನಡದಲ್ಲಿ ಮಕ್ಕಳ ಸಾಹಿತ್ಯ | ಡಾ. ಬೆಳವಾಡ ಮಂಜುನಾಥ | ಕ.ವಿ.ವಿ. ಹಂಪಿ, ೨೦೧೦ |
| ೩೨. | ಮಕ್ಕಳ ನೂರು ಕಥೆಗಳು | ಡಿ.ಎನ್. ಶ್ರೀನಾಥ | ದಿವ್ಯಚಂದ್ರ ಪ್ರಕಾಶನ, ಬೆಂಗಳೂರು, ೨೦೧೦ |
| ೩೩. | ಸತ್ಯಾರ್ಥಿ ಅಭಿನಂದನಾ ಗ್ರಂಥ | ಸಂ. ಡಾ. ಸಿ.ಪಿ.ಕೆ. ನಾವಲಗಿ | ಅಭಿನಂದನಾ ಸಮಿತಿ, ಬೈಲಹೊಂಗಲ, ೨೦೧೩ |
| ೩೪. | ಅಥಣಿಯ ಸಮಗ್ರ ದರ್ಶನ | ಸಂ. ಡಾ. ವ್ಹಿ.ಎಸ್. ಮಾಳಿ | ವಿವೇಚನಾ ಪ್ರಕಾಶನ, ಅಥಣಿ, ೨೦೦೭ |
| ೩೫. | ಬಸವಪ್ರಭು ಅಭಿನಂದನಾ ಗ್ರಂಥ | ಸಂ. ಡಾ. ಎಂ.ಎಂ. ಕಲಬುರ್ಗಿ | ಅಭಿನಂದನಾ ಸಮಿತಿ, ಮಲಾಬಾದ, ೨೦೦೭ |
| ೩೬. | ಶಿಕ್ಷಣ ಸಮಸ್ಯೆಗಳು | ಎಸ್. ಕೃಷ್ಣಪ್ಪ | ಗೀತಾ ಬುಕ್ ಎಜೆನ್ಸಿ, ಮೈಸೂರು |
| ೩೭. | ದುರ್ಗಸಿಂಹನ ಪಂಚತಂತ್ರ ಕಥೆಗಳು | ಸಂ. ಡಿ.ಕೆ. ಜೋಶಿ | ಪ್ರಕಾಶ ಕೃಷ್ಣಜೋಶಿ ಪ್ರಕಾಶನಾಲಯ, ಧಾರವಾಡ, ೧೯೮೯ |
| ೩೮. | ಕನ್ನಡ ವಿಶ್ವಕೋಶ | ಸಂ. ಹಾ.ಮಾ.ನಾಯಕ | ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿ.ವಿ. ಮೈಸೂರು, ೧೯೭೧ |
| ೩೯. | ಯುಗದ ಕವಿ ಕುವೆಂಪು ಜೀವನ ಮತ್ತು ಸಾಧನೆ | ಕೆ.ಸಿ. ಶಿವಾರೆಡ್ಡಿ | ಪುಸ್ತಕ ಪ್ರಕಾಶನ, ಮೈಸೂರು, ೨೦೦೨ |

## ಅನುಬಂಧ–೧

## ಪ್ರೊ. ಸಂಗಮೇಶ ಗುಜಗೊಂಡ ಅವರ ವ್ಯಕ್ತಿಪರಿಚಯ ಹಾಗೂ ಅವರಿಗೆ ದೊರೆತ ಮಾನ ಸನ್ಮಾನಗಳು

ವಿಜಾಪೂರ ಜಿಲ್ಲೆಯ ಮಕ್ಕಳ ಸಾಹಿತ್ಯ ಪರಂಪರೆಯಲ್ಲಿ ಎಲೆಮರೆಯ ಕಾಯಿಯಂತೆ ಇರುವ ಸಂಗಮೇಶ ಮಲ್ಲಪ್ಪ ಗುಜಗೊಂಡ ಇವರು ವಿಜಾಪೂರ ಜಿಲ್ಲೆಯ ಬಸವನಬಾಗೇವಾಡಿ ತಾಲೂಕಿನ ಮನಗೂಳಿ ಎಂಬ ಪುಟ್ಟ ಗ್ರಾಮದಲ್ಲಿ ೧೯೬೪ ಅಗಸ್ಟ ೨ ರಂದು. ತಂದೆ ಮಲ್ಲಪ್ಪ, ತಾಯಿ ಮಹಾದೇವಿ. ಇವರ ಪವಿತ್ರ ಉದರದಿಂದ ಜನಿಸಿದರು. ಹಳ್ಳಿಯ ಪರಿಸರದಲ್ಲಿ ಬೆಳೆದು ಬಂದ ಇವರು ಪ್ರಾಥಮಿಕ ಹಾಗೂ ಪ್ರೌಢ ಶಿಕ್ಷಣ ಸ್ವಂತ ಊರಿನಲ್ಲಿಯೇ ಮುಗಿಸಿಕೊಂಡು ೧೯೮೭ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಲ್ಲಿ ಭೂಗೋಳಶಾಸ್ತ್ರ ವಿಷಯದಲ್ಲಿ ಚಿನ್ನದ ಪದಕದೊಂದಿಗೆ ಸ್ನಾತಕೋತ್ತರ ಪದವಿ ಮುಗಿಸಿದರು. ೧೯೮೭ ರ ಜುಲೈ ೨೩ರಿಂದ ಮೂಡಲಗಿಯ ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯದಲ್ಲಿ ಅಧ್ಯಾಪಕರಾಗಿ ಸೇವೆ ಸಲ್ಲಿಸಲು ಪ್ರಾರಂಭಿಸಿದರು.

**ದೊರೆತ ಮಾನ ಸಮ್ಮಾನಗಳು:**

೧. ೧೯೯೪ ರಲ್ಲಿ 'ನೂರುನಾಣ್ಯ ಮೂರು ಮಾತು', ಕನ್ನಡ ಪುಸ್ತಕ ಪ್ರಾಧಿಕಾರದಿಂದ ಯುವ ಬರಹಗಾರ ಬಹುಮಾನ

೨. ೧೯೯೬ ರಲ್ಲಿ ರಾಜ್ಯಮಟ್ಟದ ತಮ್ಮಣ್ಣಪ್ಪ ಚಿಕ್ಕೋಡಿ ಮಕ್ಕಳ ಸಾಹಿತ್ಯ ಪುರಸ್ಕಾರ (ನೂರು ನಾಣ್ಯ ಮೂರು ಮಾತು ಕೃತಿಗೆ)

೩. ೧೯೯೭ ರಲ್ಲಿ ಮಕ್ಕಳ ಸಾಹಿತ್ಯ ಕ್ಷೇತ್ರದ ಸೇವೆಗಾಗಿ ವಿಜಾಪೂರದ ಮಕ್ಕಳ ಸಾಹಿತ್ಯ ಸಂಗಮದ ಸನ್ಮಾನ

೪. ೧೯೯೮ ರಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ನಡೆಸಿದ ಉದಯೋನ್ಮುಖ ಮಕ್ಕಳ ಸಾಹಿತಿಗಳ ಹಸ್ತಪ್ರತಿ 'ಹಸಿರಿನ ಗೂಡನು ಕಟ್ಟುವೆವು' ರಾಜ್ಯಮಟ್ಟದ ಪ್ರಥಮ ಬಹುಮಾನ.

೫. ೨೦೦೨ ರಲ್ಲಿ ಶೈಕ್ಷಣಿಕ ಸಾಹಿತ್ಯಿಕ ಸೇವೆಗಾಗಿ ಬೆಂಗಳೂರಿನ ಕಲೆ ಸಾಹಿತ್ಯ ಸಂಸ್ಕೃತಿ ಮತ್ತು ರಂಗಭೂಮಿ ಸಂಸ್ಥೆ (ರಿ) ಇವರಿಂದ ಡಾ. ಎಸ್. ರಾಧಾಕೃಷ್ಣನ್ ರಾಜ್ಯಮಟ್ಟದ ಪ್ರಶಸ್ತಿ.

೬. ೨೦೦೨ ರಲ್ಲಿ ಕನ್ನಡ ಪುಸ್ತಕ ಪ್ರಾಧಿಕಾರ ಇವರಿಂದ ಪುಸ್ತಕ ಸೊಗಸು ಬಹುಮಾನ.

೭. ೨೦೦೪ ರಲ್ಲಿ 'ಅಮ್ಮಾ ಕೇಳೆ' ಮಕ್ಕಳ ಕವಿತಾ ಸಂಕಲನಕ್ಕೆ ಕನ್ನಡ ಪುಸ್ತಕ ಪ್ರಾಧಿಕಾರ ಇವರಿಂದ ಬಹುಮಾನ.

೮. ವಿಜಯ ಪ್ರಕಾಶನ ನಲವತ್ತವಾಡ ಇವರಿಂದ 'ಮಕ್ಕಳ ರತ್ನ' ಪ್ರಶಸ್ತಿ ಸನ್ಮಾನ.

೯. ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಪಿ. ವಿಜಯಕುಮಾರ ದತ್ತಿನಿಧಿ ಪ್ರಶಸ್ತಿ ಸನ್ಮಾನ.

೧೦. ಲಿಂ. ಮಹಾದೇವಪ್ಪ ಲೋಕಪ್ಪ ಕರ್ಲಟ್ಟಿ ಮಕ್ಕಳ ಸಂಗಮ ಬನಹಟ್ಟಿ ಮಕ್ಕಳ ಸಾಹಿತ್ಯ ಪುರಸ್ಕಾರ.

೧೧. ೨೦೦೬ ರಲ್ಲಿ ಕಲಾ ಬದುಕು ಸಂಸ್ಥೆ, ಗೋಕಾಕ ಇವರಿಂದ ಶೈಕ್ಷಣಿಕ ಸಾಹಿತ್ಯಿಕ ಸೇವೆಗಾಗಿ 'ಸದ್ಭಾವನಾ ಪ್ರಶಸ್ತಿ'.

೧೨. ೨೦೧೦ ರಲ್ಲಿ 'ಮತ್ತೆ ಬಂತು ಚೈತ್ರ' ಕೃತಿಗೆ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಪಿ. ವಿಜಯಕುಮಾರ ದತ್ತಿ ಬಹುಮಾನ.

## ಅನುಬಂಧ–೨

## ಪ್ರೊ. ಸಂಗಮೇಶ ಗುಜಗೊಂಡ ಅವರ ಒಟ್ಟು ಕೃತಿಗಳು

೧. ೧೯೯೪ ರಲ್ಲಿ 'ಗ್ರಾಮೀಣ ಸಾಂಸ್ಕೃತಿಕ ಪರಂಪರೆ ಮತ್ತು ರಾಷ್ಟ್ರೀಯ ಭಾವೈಕ್ಯ' ಉಪನ್ಯಾಸ ಗ್ರಂಥ ಪ್ರಕಟ.

೨. ೧೯೯೫ ರಲ್ಲಿ 'ನೂರು ನಾಣ್ಯ ಮೂರು ಮಾತು' ಮಕ್ಕಳ ಕಥಾ ಸಂಕಲನ ಪ್ರಟಕ.

೩. ೨೦೦೨ ರಲ್ಲಿ 'ಅಮ್ಮಾ ಕೇಳೆ' ಕವನ ಸಂಕಲನ ಪ್ರಕಟ.

೪. ೨೦೦೮ ರಲ್ಲಿ 'ಮತ್ತೆ ಬಂತು ಚೈತ್ರ' ಮಕ್ಕಳ ಕವನ ಸಂಕಲನ ಪ್ರಕಟ.

೫. ೨೦೦೮ ರಲ್ಲಿ ಮಹಾರಾಷ್ಟ್ರದ ರಾಜ್ಯ ಪಠ್ಯಪುಸ್ತಕದಲ್ಲಿ ಬಾಲಭಾರತಿ ೩ನೇ ತರಗತಿಗೆ 'ಹುಟ್ಟುಹಬ್ಬ' ಕವಿತೆ ಪ್ರಕಟ.

೬. ೨೦೧೨ ರಲ್ಲಿ 'ಸುವರ್ಣ ಸ್ವಾತಂತ್ರ್ಯ ಮತ್ತು ಪಾಪಣ್ಣ ಗುರುಗಳು', ಮಕ್ಕಳ ಕಥಾ ಸಂಕಲನ ಪ್ರಕಟ.

೭. ೨೦೧೨ ರಲ್ಲಿ ಕರ್ನಾಟಕ ಪಠ್ಯಪುಸ್ತಕ ಸಂಘ ಬೆಂಗಳೂರು 'ನುಡಿಕನ್ನಡ'ದಲ್ಲಿ ೫ನೇ ತರಗತಿಗೆ 'ಇನಾಮು ಪತ್ರ' ಕಥೆ ಪ್ರಕಟ.

೮. ೨೦೧೩ ರಲ್ಲಿ ಕರ್ನಾಟಕ ಪಠ್ಯ ಪುಸ್ತಕ ಸಂಘ ಬೆಂಗಳೂರು 'ನುಡಿಕನ್ನಡ'ದಲ್ಲಿ ೬ನೇ ತರಗತಿಗೆ 'ಪ್ರೀತಿಯೇ ದೇವರು' ಕವನ ಪ್ರಕಟ.

೯. ೨೦೧೪ ರಲ್ಲಿ 'ಕೈವಲ್ಯ ಚಕ್ರವರ್ತಿ ನಿಜಗುಣ ಶಿವಯೋಗಿ ಜೀವನ ಚರಿತ್ರೆ' ಪ್ರಕಟ.

೧೦. ೨೦೧೪ ರಲ್ಲಿ ಮಹಾರಾಷ್ಟ್ರ ರಾಜ್ಯ ಪಠ್ಯಪುಸ್ತಕದಲ್ಲಿ ಬಾಲಭಾರತಿ ೩ನೇ ತರಗತಿಗೆ 'ಹೋದಮಳೆ ಬಂತು' ಕಥೆ ಪ್ರಕಟ.

ಅನುಬಂಧ -೩

## ಛಾಯಾಚಿತ್ರಗಳು



**ಸಂಗಮೇಶ ಗುಜಗೊಂಡ**

ಮಕ್ಕಳ ಸಾಹಿತಿಗಳು, ಮೂಡಲಗಿ



'ಅಮ್ಮಾ ಕೇಳೆ' ಕವನ ಸಂಕಲನಕ್ಕೆ ವಿಜಯ ಪ್ರಕಾಶನ, ನಲವತ್ತವಾಡ ಪೂಜ್ಯ ಶ್ರೀ ಸಿದ್ಧೇಶ್ವರ ಶ್ರೀಗಳಿಂದ 'ಮಕ್ಕಳ ರತ್ನ ಪ್ರಶಸ್ತಿ ಸ್ವೀಕರಿಸುತ್ತಿರುವುದು



'ಅಮ್ಮಾ ಕೇಳೆ' ಕವನ ಸಂಕಲನಕ್ಕೆ ಪುಸ್ತಕ ಸೊಗಸು ಬಹುಮಾನ ೨೦೦೨, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು ಇವರಿಂದ ಸ್ವೀಕರಿಸುತ್ತಿರುವುದು



ಮಹಾದೇವಪ್ಪ ಲೋಕಪ್ಪ ಕರ್ಲಟ್ಟಿ ರಾಜ್ಯಮಟ್ಟದ ಮಕ್ಕಳ ಸಾಹಿತ್ಯ ಪುರಸ್ಕಾರ.
ಪ್ರೊ. ಜಯಂವಂತ ಕಾಡದೇವರ ಅವರಿಂದ ಸ್ವೀಕರಿಸುತ್ತಿರುವುದು



'ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣ ಗುರುಗಳು' ಕಥಾಸಂಕಲನಕ್ಕೆ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನದ ಪಿ. ವಿಜಯಕುಮಾರ ದತ್ತಿ ಬಹುಮಾನ ಸ್ವೀಕರಿಸುತ್ತಿರುವುದು




ಘಟಪ್ರಭಾದಲ್ಲಿ 'ಅಮ್ಮಾ ಕೇಳೆ' ಚನ್ನವೀರ ಕಣವಿಯವರಿಂದ ಪುಸ್ತಕ ಬಿಡುಗಡೆ ಸಮಾರಂಭ



ಪೂಜ್ಯ ಶ್ರೀ ಸಿದ್ಧೇಶ್ವರ ಮಹಾಸ್ವಾಮಿಗಳೊಂದಿಗೆ ಕಾರ್ಯಕ್ರಮವೊಂದರಲ್ಲಿ



ವಿಜಯಪೂರದಲ್ಲಿ ಜರುಗಿದ 'ನವರಸಪೂರ ಉತ್ಸವ' ೨೦೦೫ ಕವಿಗೋಷ್ಠಿಯಲ್ಲಿ ಭಾಗವಹಿಸಿದ್ದು



ಮಕ್ಕಳ ಸಾಹಿತ್ಯ ಸಂಗಮ ವಿಜಯಪೂರ ಕವಿಗೋಷ್ಠಿ ಉದ್ಘಾಟಿಸುತ್ತಿರುವುದು




ತಮ್ಮಣ್ಣಪ್ಪ ಚಿಕ್ಕೋಡಿ ರಾಜ್ಯಮಟ್ಟದ ಮಕ್ಕಳ ಸಾಹಿತ್ಯ ಪುರಸ್ಕಾರ ಸ್ವೀಕರಿಸುತ್ತಿರುವುದು



ಚನ್ನವೀರ ಕಣವಿ, ಗುರುಲಿಂಗ ಕಾಪಸೆ ಇವರೊಂದಿಗೆ ಕಾರ್ಯಕ್ರಮವೊಂದರಲ್ಲಿ



ಬಿ.ಇಡಿ. ವಿದ್ಯಾರ್ಥಿಗಳೊಂದಿಗೆ ಸಂವಾದ ಕಾರ್ಯಕ್ರಮ



ಗೋಕಾಕ ತಾಲೂಕಾ ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸಿದ ಕಾರ್ಯಕ್ರಮವೊಂದರಲ್ಲಿ



ನೂರು ನಾಣ್ಯ ಮೂರು ಮುಖ ಗ್ರಂಥ ಬಿಡುಗಡೆ ಸಮಾರಂಭದಲ್ಲಿ ಮಾತನಾಡುತ್ತಿರುವುದು

# ಪ್ರಶಸ್ತಿ ಪತ್ರಗಳು

ಸ್ನೇಹ ಸಂಪದ ಪ್ರಕಾಶನ ಬನಹಟ್ಟಿ



## ಲಿಂ. ತಮ್ಮಣ್ಣಪ್ಪ ಚಿಕ್ಕೋಡಿ ಸಾಹಿತ್ಯ ಪುರಸ್ಕಾರ

೧೯೯೬

ಶ್ರೀ/~~ಶ್ರೀಮತಿ~~ **ಸಂಗಮೇಶ ಗುಜಗೊಂಡ**

ಇವರ ಕೃತಿ "ನೂರು ಸಾಲು, ಮೂರು ಮಾತು (ಮಕ್ಕಳ ಸಾಹಿತ್ಯ)"ಗೆ ೧೯೯೬ ರ ಸೃಜನಾತ್ಮಕ / ~~ಸೃಜನೇತರ~~ ಲಿಂ. ತಮ್ಮಣ್ಣಪ್ಪ ಚಿಕ್ಕೋಡಿ ಸಾಹಿತ್ಯ ಪುರಸ್ಕಾರ ನೀಡಲಾಗಿದೆ.

ಅಭಿನಂದನೆಗಳು.

ಮುಖ್ಯ ಅತಿಥಿಗಳು

ಸ್ನೇಹ ಸಂಪದ ಪ್ರಕಾಶನ

ವಿಜಾಪುರ ಜಿಲ್ಲಾ ಮಕ್ಕಳ ಸಾಹಿತ್ಯ ಸಂಗಮ(ರಿ)

## ಸನ್ಮಾನ ಪತ್ರ

ಮಕ್ಕಳ ಸಾಹಿತ್ಯಕ್ಷೇತ್ರದಲ್ಲಿ ಗಣನೀಯ ಸೇವೆ ಸಲ್ಲಿಸಿದ ಹಾಗೂ ಮಕ್ಕಳ ಸಾಹಿತ್ಯ ಸಂಗಮದ ಅಭಿವೃದ್ಧಿಗಾಗಿ ಶ್ರಮಿಸಿದ ಶ್ರೀ/ಶ್ರೀಮತಿ ಸಂಗಮೇಶ ಗುಜಗೊಂಡ ಅವರಿಗೆ ೭ ನೇ ಮಕ್ಕಳ ಸಾಹಿತ್ಯ ಸಮ್ಮೇಳನದ ಶುಭ ಸಂದರ್ಭದಲ್ಲಿ ಗೌರವ ಪೂರ್ವಕವಾಗಿ ನೀಡಲಾದ ಸನ್ಮಾನ ಪತ್ರ.

ಸಮ್ಮೇಳನಾಧ್ಯಕ್ಷರು

ಅಧ್ಯಕ್ಷರು
ವಿಜಾಪುರ ಜಿಲ್ಲಾ ಮಕ್ಕಳ
ಸಾಹಿತ್ಯ ಸಂಗಮ

ಕೈ. ಶ್ರೀ ಮಹಾದೇವಪ್ಪ ಲೋಕಪ್ಪ ಕರಲಟ್ಟಿ ಸಾಹಿತ್ಯ ಪ್ರತಿಷ್ಠಾನ

(ಮಹಿಳಾ ಸಾಹಿತ್ಯ ಪ್ರಶಸ್ತಿ ಹಾಗೂ ಮಕ್ಕಳ ಸಾಹಿತ್ಯ ಪ್ರಶಸ್ತಿ)

# ಪ್ರಶಸ್ತಿ ಪತ್ರ

ಶ್ರೀ/ ಸಂಗಮೇಶ ಗುಜಗೊಂಡ

ಇವರು ೨೦೦೨ ನೇ ವರುಷದ ಮಕ್ಕಳ / ಮಹಿಳಾ ಪ್ರಶಸ್ತಿಯನ್ನು 'ಅಮ್ಮಾ ಕೇಳಿ' ಕೃತಿಗೆ ಪಡೆದಿದ್ದಾರೆ.

ಅಭಿನಂದನೆಗಳೊಂದಿಗೆ,

Surekha L. ...

ಅಧ್ಯಕ್ಷರು | ಸಂಚಾಲಕರು | ಅಧ್ಯಕ್ಷರು | ಮುಖ್ಯ ಅತಿಥಿ

ಮ.ಲೋ. ಕರಲಟ್ಟಿ ಪ್ರತಿಷ್ಠಾನ    ಮ.ಲೋ. ಕರಲಟ್ಟಿ ಪ್ರತಿಷ್ಠಾನ

---

# ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಬೆಳಗಾವಿ.

೯೬, ಪ್ರಸಾದ, ಸ್ವಾಮಿನಾಥ ಕಾಲೋನಿ, ರಾಣಿಚನ್ನಮ್ಮ ನಗರ, ಬೆಳಗಾವಿ.

## ದತ್ತಿನಿಧಿ ಪ್ರಶಸ್ತಿ -೨೦೦೩

೨೦೦೨ ನೇ ವರ್ಷದಲ್ಲಿ ಪ್ರಕಟಗೊಂಡ ಬೆಳಗಾವಿ ಜಿಲ್ಲೆಯ ಲೇಖಕರ ಕೃತಿಗಳಲ್ಲಿ

**ಶ್ರೀ ಸಂಗಮೇಶ ಗುಜಗೊಂಡ ಅವರ**

**"ಅಮ್ಮ ಕೇಳಿ"**

ಗ್ರಂಥವು ಉತ್ತಮೋತ್ತಮವಾದುದು ಎಂದು ನಿರ್ಧರಿಸಿ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನವು ಅವರಿಗೆ "ಶ್ರೀ. ಪಿ. ವಿಜಯಕುಮಾರ ದತ್ತಿ ಪ್ರಶಸ್ತಿ" ಯನ್ನು ನೀಡಿ ಗೌರವಿಸಲು ಸಂತೋಷಿಸುತ್ತದೆ.

ದಿನಾಂಕ : ೨೮-೧೨-೨೦೦೩

ಕಾರ್ಯದರ್ಶಿ (ಡಾ. ಶ್ರೀನಿವಾಸ ಕುಲಕರ್ಣಿ)

ಅಧ್ಯಕ್ಷರು (ದಿಂ. ಬ. ಜೋಶಿ)


ಕಲಾ ಬದುಕು ಸಂಸ್ಥೆ ಗೋಕಾಕ (ರಿ)
"ಕಲಾ ಬದುಕು" ಸಾಮಾಜಿಕ-ಸಾಂಸ್ಕೃತಿಕ ಸೇವಾ ಸಂಸ್ಥೆ.
"50 ನೇ ಸುವರ್ಣ ಕರ್ನಾಟಕೋತ್ಸವ ನಿಮಿತ್ತ"
"ಸದ್ಭಾವನಾ ಪ್ರಶಸ್ತಿ ಪತ್ರ"
ಪ್ರೊ. ಎಸ್ ಎಂ. ಗುಜಗುಂಡ
ಖ್ಯಾತ ಮಕ್ಕಳ ಸಾಹಿತಿ


ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಬೆಳಗಾವಿ
೧೦೮೧, ಕೇಳಕರಬಾಗ, ಬೆಳಗಾವಿ
ಶ್ರೀ ಪ. ವಿಜಯಕುಮಾರ ದತ್ತಿ ಪ್ರಶಸ್ತಿ
(ಶಿಶು ಸಾಹಿತ್ಯಕ್ಕಾಗಿ)
ಶ್ರೀ ಸಂಗಮೇಶ ಗುಜಗೊಂಡ
ಅವರ "ಮತ್ತೆ ಬಂತು ಚೈತ್ರ" (ಕವನ ಸಂಕಲನ) ಪುಸ್ತಕವು ೨೦೦೮ ರಲ್ಲಿ ಪ್ರಕಟವಾದ
ಶ್ರೇಷ್ಠ ಶಿಶು ಸಾಹಿತ್ಯ ಕೃತಿಯೆಂದು ನಿರ್ಣಯಿಸಿ ಈ ದತ್ತಿ ಪ್ರಶಸ್ತಿಯನ್ನು ನೀಡಿ
ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನವು ಗೌರವಿಸುತ್ತದೆ.
ಶ್ರೀನಿವಾಸ ಕುಲಕರ್ಣಿ
ಎಸ್. ಎಂ. ಕುಲಕರ್ಣಿ



# ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನ, ಬೆಳಗಾವಿ

೧೮೧೦, ಕೇಳಕರಬಾಗ, ಬೆಳಗಾವಿ

## ಶ್ರೀ ಪಿ. ವಿಜಯಕುಮಾರ ದತ್ತಿ ಪ್ರಶಸ್ತಿ

(ಶಿಶು ಸಾಹಿತ್ಯಕ್ಕಾಗಿ)

## ಪ್ರೊ. ಸಂಗಮೇಶ ಗುಜಗೊಂಡ

ಅವರ "ಸುವರ್ಣ ಸ್ವಾತಂತ್ರ್ಯ ಹಾಗೂ ಪಾಪಣ್ಣಗುರುಗಳು" ಪುಸ್ತಕವು ೨೦೧೨ ರಲ್ಲಿ ಪ್ರಕಟವಾದ ಶ್ರೇಷ್ಠ ಶಿಶು ಸಾಹಿತ್ಯ ಕೃತಿಯೆಂದು ನಿರ್ಣಯಿಸಿ ಈ ದತ್ತಿ ಪ್ರಶಸ್ತಿಯನ್ನು ನೀಡಿ ಬೆಳಗಾವಿ ಜಿಲ್ಲಾ ಸಾಹಿತ್ಯ ಪ್ರತಿಷ್ಠಾನವು ಗೌರವಿಸಲು ಸಂತೋಷಪಡುತ್ತದೆ.

ದಿನಾಂಕ : [illegible]

ಬಿ. ಕೆ. ಕುಲಕರ್ಣಿ

ಎಸ್. ಎಂ. ಕುಲಕರ್ಣಿ

